











---

ಮುದ್ರಕರು : **ನೇಹಾ ಕ್ರಿಯೇಷನ್ಸ್,** ಬನಶಂಕರಿ 2ನೇ ಹಂತ, ಬೆಂಗಳೂರು-70.

ಕೂಡಕಂಡಿರ ತಮ್ಮಯ್ಯ, 98453 19878, 080-26710552

**ಸಂಪಾದಕೀಯ ಮಂಡಳಿ**
**ಪ್ರಧಾನ ಸಂಪಾದಕ:**
ವಿನೋದ್ ಮೂಡಗದ್ದೆ

**ಸಂಪಾದಕ ಮಂಡಳಿ:**
ಅಮೆಮನೆ ಪಾಲಾಕ್ಷ
ಕೊಂಬಂಡ ಜೀವನ್

## ಸಂಪಾದಕೀಯ

ಎರಡು ಸಂಚಿಗಳ ದಾಟಿ ಮೂರನೆ ಸಂಚಿಕೆ ಇದೀಗ ನಿಮ್ಮ ಮುಂದೆ ಉಟ್ಟು. ಎಲ್ಲವೂ ಕಾಫಿ, ಒಳ್ಳೆ ಮೆಣ್ಸ್, ಅಡಿಕೆ ಕುಯ್ಲ್ ಲಿ ತೊಡಗಿಸಿಕಂಡಿರ್‍ವ ತಿಂಗ. ಈ ವರ್ಸ ಬಂದ ಹಂಙ ಮಳೆಗೆ ಕಾಫಿಗೆ ಹೆಚ್ಚಿನೂ ತೊಂದರೆ ಆತ್ಲೆ. ಆದರೆ ಕೆಲವ್ ಕಡೆ ಒಳ್ಳೆ ಫಸಲ್ ಇದ್ದ ಮೆಣ್ಸ್ ಬಳ್ಳಿಗ ಬಾಡಿ ಕೈಗ ಬಂದದ್ ಬಾಯ್ಗೆ ಬಾರದಂಗೆ ಆವ್ರು. ಇನ್ನ್ ಕೆಲವ್ ಕಡೆ ಈ ವರ್ಸ ಫಸಲ್ ಲಾಯ್ಕ ಇದ್ದರೂ ಮುಂದಿನ ವರ್ಸಕೆ ಬುಟ್ಟ ಫಸಲ್‌ನ ಉಳ್ಸಿಕಣಿಕೆ ಪರ್‍ದಾಡ್ತಾ ಒಳೊ. ಮಳೆನ ನಿರೀಕ್ಸೆಲಿ ರೈತರ್ ಮುಗಿಲ್ ನೋಡ್ತಾ ಇರೋ ಸ್ಥಿತಿ ಆವ್ರು.

ದೇಸಲಿ ಸಂಚನ ಮೂಡ್ಸಿದ ನೋಟು ರದ್ದತಿ ವಿಚಾರ ಈಗ ತಣ್ಣಂಗೆ ಆಗಿ ಜನಜೀವನ ಯಥಾಸ್ಥಿತಿಗೆ ಮರಳ್ಯುಟು. 104 ಉಪಗ್ರಹಗಳ ಒಮ್ಮೆಗೇ ಆಕಾಸಕ್ಕೆ ಹಾರ್‍ಸಿ ಇಸ್ರೋ ತಮ್ಮ ಶಕ್ತಿ ಹಂಗೆ ದೇಶದ ಶಕ್ತಿನೂ ಪ್ರಪಂಚಕ್ಕೆ ತೋರ್‍ಸಿ ಕೊಟ್ಟದ್ ನಮ್ಮೆಲ್ಲವ್ಕೆ ಹೆಮ್ಮೆನ ವಿಚಾರ.

ಈ ಸಲದ ಸಂಚಿಕೆ ರೊಸ ರೂಪಲಿ, ಹೊಸ ವಿನ್ಯಾಸಲಿ ಮೂಡಿ ಬಂದುಟು. ಹಂಗೆನೆ ಹೊಸ ವಿಚಾರಗಳ ಸ ಹೊತ್ತು ತಂದುಟು. ಸಾಹಿತಿ ಜಯಮ್ಮ ಚೆಟ್ಟಿಮಾಡ ಅವರ ಸ್ಥಿರ ಶೀರ್ಷಿಕೆ ಹಳಬರ ಜೋಳಿಗೆ ಈ ಸಂಚಿಕೆಂದ ಸುರು ಆವ್ರು. ಹಂಗೆನೆ ಮೂಡುಬಿದಿರೆಯ ಕವಯತ್ರಿ ಸುಮಂಗಲ ಕಿನಿ ಅವು ಅರೆಬಾಸೆ ಮೇಲೆನ ಪ್ರೀತಿ ವಿಶ್ವಾಸಕ್ಕೆ ತಮ್ಮ ಕವನ 'ರೈತ' ನ ಕಳ್ಸಿ ಕೊಟ್ಟೊಳೊ. ಅವರ ಕವನಗ ಸುಧಾ, ತರಂಗ, ಮಯೂರ ಹಿಂಗೆ ರಾಜ್ಯದ ಬೇರೆ ಬೇರೆ ಪತ್ರಿಗಲ್ಲಿ ಪ್ರಕಟ ಆವ್ರು, ಕನ್ನಡಲಿ ಇದ್ದ ಕವನನ ಅರೆಬಾಸೆಗೆ ರೂಪಾಂತರಿಸಿ ಇಲ್ಲಿ ಪ್ರಕಟಿಸಿಯೊಳೊ.

ಹಂಗೆನೆ ಈ ಸಲದ ಮುಖಪುಟನ ಆರಿಸಿ ಕೊಟ್ಟ ಗೆಳತಿನ ನ ಇಲ್ಲಿ ನೆನ್ಸಿಕಣೆ. ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗಲಿ ಆಯಾ ತಿಂಗಲ್ಲಿ ತೀರಿ ಹೋದವರ ವಿವರನ ಕೊಡ್ತಾ ಒಳೊ, ಉಳುವಾರನ ರೋಶನ್ ಅವು ಈ ಅಂಕಣಕೆ ಬಾಳ ಸಹಾಯ ಮಾಡೊಳೊ. ಎರಡು ಸಂಚಿಕೆಗಳ ಓದಿದ ಎಲ್ಲವೂ ಒಳ್ಳೆ ಅಭಿಪ್ರಾಯನೇ ಕೊಟ್ಟೊಳೊ. ಅದರೊಟ್ಟಿಗೆ ಅಗತ್ಯ ಸಲಹೆ ಸೂಚನೆನ ಸ ನೀಡ್ಯೊಳೊ. ನಿಮ್ಮ ಪ್ರೀತಿ, ಸಹಕಾರ ಹಿಂಗೆ ಇರ್‍ಲಿ ತಾ ಕೇಳಿಕಣೆ.

**–ಇಂತಿ ವಿನೋದ್**

## ಮುಡ್ಪುನ ಒಳ್ಗೆ

# ಭಕ್ತಂಗೆ ತನ್ನ ತಲೆ ಕೂದ್ಲ್ ತೋರ್ಸಿದ ದೇವಿ

**–ಜಯಮ್ಮ ಚೆಟ್ಟಿಮಾಡ**

ಹಿಂದೆ ಶ್ರೀ ಮೂಕಾಂಬಿಕಾ ದೇವಸ್ಥಾನ ನಗರ, ಕೆಳದಿ ಚೆನ್ನಮ್ಮಾಜಿ, ಶಿವಪ್ಪ ನಾಯಕನಾದಿಯಾಗಿ, ವಿಜಯನಗರದ ಆಡಳಿತಕ್ಕೆನು ಒಳಪಟ್ಟಿದ್ದ ಕಾಲ ಅದ್.

ದೇವಸ್ಥಾನಲಿರ್ವ ದೇವಿಯ ಚಿನ್ನಾಭರಣಗ ಈ ರಾಜ ಮಹಾರಾಜ ಪಾಳೆಗಾರರ್ಂದ ಮೂಕಾಂಬಿಕೆಗೆ ಪ್ರೀತ್ಯರ್ಥವಾಗಿ ಯಾ ಹರಕೆ ರೂಪಲಿ ಒಪ್ಪಿಸೊಳೊ ತಾ ಉಲ್ಲೇಖ ಉಟ್ಟು.

ಹಂಗೆನೆ ಅರಮನೆಂದ ಆಗಾಗ ಮೂಕಾಂಬಿಕೆಗೆ ಹರ್ಕೆ ಕಾಣಿಕೆಗ ಸ ಬರ್ತಾ ಇತ್ತ್. ಅವುಗಳ್ನ ಕೊಲ್ಲೂರು ಮತ್ತೆ ನಗರಕೆ ಕೊಂಡಿಯಾಗಿ ಕಲ್ಲ್‌ಹಾಸ್‌ನ ದುರ್ಗಮ ಕಾಡ್‌ಲಿ ಈಗಲೂ ಕುರುಹುಗ ಇರ್ವ ಒಳ ದಾರಿಲಿ ಕುದುರೆ ಸವಾರಿಲಿ ದೇವಸ್ಥಾನಕೆ ತಲ್ಪಿಸಿ, ಅಲ್ಲಿಂದ ದೇವ್ರು ತೀರ್ಥ, ಹೂ, ಪ್ರಸಾದನ ಅರಮನೆಗೆ ಕಳ್ಸುವ ವಾಡಿಕೆ ಇತ್ತ್. ಹಂಗೆ ಒಂದ್ ಸಲ ಅರಮನೆಗೆ ಕಳ್ಸಿದ ಹೂ ಮಾಲೆಲಿ ತಲೆ ಕೂದಲ್‌ನ ಕಂಡ ಅರಸ ಆ ಬಗೆಲಿ ತಂತ್ರಿಗಳ್ಲಿ ವಿಚಾರ್ಸ್‌ಕನ ತಂತ್ರಿಗ ಅಂಬೆರ್ಪುಲಿ ಅದ್ ಮೂಕಾಂಬಿಕೆದೇ ಇರೋಕು ತಾ, ಹಂಗೆನೇ ರಾಜಂಗೆ ತಿಳ್ಸಿಬುಡು ತಾ ದೂತಂಗೆ ಹೇಳಿ ಕಳ್ಸಿತ್. ಹಂಗೆ ಹೇಳದೆ ತಂತ್ರಿಗಳ್ಗೆ ಬೇರೆ ದಾರಿ ಇತ್ಲೆ.

ವಿಷಯ ಆದ್ ಇಷ್ಟೆ, ಅಂದ್ ಮಾಮೂಲು ಹೊತ್ತ್‌ಗೆ ಅರಮನೆಂದ ಕುದುರೆ ಸವಾರಿ ಬಾತ್ಲೆ, ಇನ್ನ್ ಬಾದ್ಲೆ ತಾ ಗ್ಯಾನ ಮಾಡಿ ಹೂ ಮಾಲೆನ ಅವನ ಹೆಣ್ಣ್‌ಗೆ ಮುಡಿಯಕೆ ಕೊಟ್ಟದೆ. ಅವ್ಳ್ ಮುಡ್ದ ಸೊಲ್ಪ ಹೊತ್ತ್‌ಲೇ ಅರಮನೆಂದ ಕುದುರೆ ಸವಾರಿಲಿ ದೂತ ಬಂದೇ ಬುಟ್ಟದೆ.

ಪ್ರಸಾದದ ಒಟ್ಟಿಗೆ ಹೂನ ಕೊಡಿಕೆ ತಂತ್ರಿ ಒಟ್ಟಿಗೆ ಹೂ ಇರ್ದುಲೆ. ಹೂ ನೋಡ್ರೆ ಹೆಣ್ಣ್‌ನ ಮುಡಿಲಿ ಉಟ್ಟು. ಎಂಥ ಮಾಡ್ದು ಈಗ? ವಿಸಯನ ಹೆಣ್ಣ್‌ಗೆ ತಿಳ್ಸಿ ಅವ್ಳ ಮುಡಿಲಿದ್ದ ಹೂಮಾಲೆನ ಪ್ರಸಾದದೊಟ್ಟಿಗೆ ಅರಮನೆಗೆ ಕಳ್ಸಿ ಕೊಟ್ಟದೆ. ಹೂಮಾಲೆ ತೆಗ್ಯಕನ ಗಾಬರಿಲಿ ಒಂದು ತಲೆ ಕೂದಲ್ ಹೂಮಾಲೆಲೆ ಸಿಕ್ಕಿಕಂಡದೆ. ಈಗ ತಂತ್ರಿಗ ಇನ್ನೂ ಪೇಚ್‌ಗೆ ಸಿಕ್ಕಿಕಂಡೊ. ಅದ್ ದೇವಿನ ಕೂದಲ್‌ತ ಹೇಳ್ದೆ ಬೇರೆ ವಿಧಿನೇ ಇಲ್ಲೆ. ಹೆಂಗೂ ತಲೆ ಹಾರುವ ಇಕ್ಕಟ್‌ಲಿ ಸಿಕ್ಕಿಕಂಡೊಳೊ.

ಒಂದೋ ತಂತ್ರಿಗ ದೇವನ ತಲೆಕೂದಲ್ ದೇವಸ್ಥಾನಲಿ ತೋರ್ಸಕು, ಇಲ್ಲೆ ತೇಳ್ರೆ ಅರಸ ಕೊಡೋ ಉಗ್ರ ಶಿಕ್ಷೆನ ಅನುಭವಿಸೊಕು. ರಾಜ ದೇವರ ಮೇಲೆ ಭಾರ ಹಾಕಿ ಸುಮ್ಮನೆ ಇದ್ದಿದ್ರೆ ಏನ್ ಸ ಆಗ್ತಾ ಇತ್ಲೆ, ಆದ್ರೆ ರಾಜ ಇದರ ಪರೀಕ್ಷೆಗೆ ಸಂಕಲ್ಪ ಮಾಡ್ತ್. ಇಂತ ಒಂದು ಘಟನೆ, ನಂಬಿಕೆ ದ್ರೋಹ ಆಗಿ ತಿರ್ಗಿದೆ ತಾ ತಂತ್ರಿ ನೆನ್ಸಿತ್ಲೆ. ಈಗ ಅವನೇ ಹೋಗಿ ತಪ್ಪು ಒಪ್ಪಿಕಂಡರೂ ಶಿಕ್ಷೆ ತಪ್ಪಿದಲ್ಲ. ಈಗ ರಾಜಂಗೆ ದೇವಿನ ತಲೆ ಕೂದ್ಲು ತೋರ್ಸೊಕು ಇಲ್ಲರೆ ರಾಜ ಕೊಡೊ ಶಿಕ್ಷೆನ ಅನುಭವಿಸೊಕು. ಬೇರೆ ದಾರಿ ಕಾಣದೆ ಆತ್ಮಹತ್ಯೆನೇ ಪರಿಹಾರತ ನಿರ್ಧರಿಸಿತ್. ಹಿಂಗೆ ಒಂದು ರಾತ್ರಿ ಸೌಪರ್ನಿಕಾ ಹೊಳೆ ದಂಡೆಲಿ ಕುದ್ದ್‌ಕಂಡ್ ದುಃಖಿಸ್ತಾ ಇದ್ದದೆ. ಆ ಹೊತ್ತ್‌ಗೆ ಮಹಾತಾಯಿ ಮೂಕಾಂಬಿಕೆನೇ ಒಂದು ಮುತ್ತೈದೆ ವೇಸಲಿ ಬಂದ್ ತಂತ್ರಿಗಳ ದುಃಖುನ ವಿಚಾರ್ಸಿ ಸಮಾಧಾನ ಮಾಡಿ, ಅಭಯ ಇತ್ತ್, ಶುಕ್ರವಾರ ರಾಜನ ಪೂಜೆಗೆ ಬಾಕೆ ಹೇಳ್ ತ ಹೇಳ್ದೆ. ಪೂಜಾ ಹೊತ್ತ್‌ಲಿ ಒಂದು ಕಣ್ಣ್ ಮುಚ್ಚಿ ದೇವಿನ ನೋಡಲಿ ಆಗ ಅವಂಗೆ ದೇವಿಯ ತಲೆ ಕೂದಲ್ ಕಂಡದೆ ತಾ ಹೇಳಿ ಅದೃಶ್ಯ ಆದೆ. ತಂತ್ರಿಗಳ್ಗೆ ದೇವಿಯೇ ಬಂದ್ ಅಭಯ ನೀಡ್ದ ಅನುಗ್ರಹ ಪ್ರಾಪ್ತ ಆತ್ ತೇಳಿ ಆನಂದಾಶ್ಚರ್ಯಂದ, ರಾಜಂಗೆ ಮುಂದಿನ ಶುಕ್ರವಾರ ಮೂಕಾಂಬಿಕೆಯ ಕೂದಲ್ ದರ್ಶನಕ್ಕೆ ಬಾಕೆ ತಿಳ್ಸಿತ್.

ಅಂದ್ ಶುಕ್ರವಾರ ರಾತ್ರಿ ರಾಜ ಪರಿವಾರ ಸಮೇತ ಗರ್ಭಗುಡಿಯ ಹೊರಗೆ ಲಕ್ಷ್ಮಿ ಮಂಟಪಲಿ ಪೂಜೆನ ನೋಡ್ತಾ ಇರ್ಕನ ಗರ್ಭಗುಡಿಂದ ಬಿಚ್ಚಿದ ತಲೆ ಕೂದಲ ರಾಶಿನೇ ಹೊರಗೆ ಬಂದ್ ರಾಜನ ಮುಖಕ್ಕೆ ನೋಡ್ತಾ ಇದ್ದ ಕಣ್ಣಿಗೇ ಬಡ್ದಂಗೆ ಆಗಿ ಅಂವ ಅಲ್ಲೇ ಮೂರ್ಛೆ ಹೋದೆ. ಕಡೆಗೆ ಎದ್ದ್ ದೇವಿಯ ಕೂದಲ್ನ ನೋಡ್ದೆ, ಪರೋಕ್ಷವಾಗಿ ಇದನ್ನ ನಂಬದ ಕಾರಣ ನೋಡ್ದ ಕಣ್ಣ್ ದೃಷ್ಟಿಹೀನ ಆದೆ. ತಂತ್ರಿಗಳ್ನ ಅನುಮಾನ್ಸಿದಕೆ ಅವರ ಬಳಿ ಕ್ಷಮೆ ಕೇಳಿ, ಅರಮನೆಗೆ ಕರ್ಸಿ ಸನ್ಮಾನ ಮಾಡ್ದೊ ತಾ ಪ್ರತೀತಿ.

# ಭಕ್ತಂಗೆ ತನ್ನ ತಲೆ ಕೂದ್ಲ್ ತೋರ್ಸಿದ ದೇವಿ

**–ಜಯಮ್ಮ ಚೆಟ್ಟಿಮಾಡ**

ಹಿಂದೆ ಶ್ರೀ ಮೂಕಾಂಬಿಕಾ ದೇವಸ್ಥಾನ ನಗರ, ಕೆಳದಿ ಚೆನ್ನಮ್ಮಾಜಿ, ಶಿವಪ್ಪ ನಾಯಕನಾದಿಯಾಗಿ, ವಿಜಯನಗರದ ಆಡಳಿತಕ್ಕೆನು ಒಳಪಟ್ಟಿದ್ದ ಕಾಲ ಅದ್.

ದೇವಸ್ಥಾನಲಿರ್ವ ದೇವಿಯ ಚಿನ್ನಾಭರಣಗ ಈ ರಾಜ ಮಹಾರಾಜ ಪಾಳೆಗಾರರ್‌ಂದ ಮೂಕಾಂಬಿಕೆಗೆ ಪ್ರೀತ್ಯರ್ಥವಾಗಿ ಯಾ ಹರಕೆ ರೂಪಲಿ ಒಪ್ಪಿಸೊಳೊ ತಾ ಉಲ್ಲೇಖ ಉಟ್ಟು.

ಹಂಗೆನೆ ಅರಮನೆಂದ ಆಗಾಗ ಮೂಕಾಂಬಿಕೆಗೆ ಹರ್ಕೆ ಕಾಣಿಕೆಗ ಸ ಬರ್ತಾ ಇತ್ತ್. ಅವುಗಳ್ನ ಕೊಲ್ಲೂರು ಮತ್ತೆ ನಗರಕೆ ಕೊಂಡಿಯಾಗಿ ಕಲ್ಲ್‌ಹಾಸ್‌ನ ದುರ್ಗಮ ಕಾಡ್‌ಲಿ ಈಗಲೂ ಕುರುಹುಗ ಇರ್ವ ಒಳ ದಾರಿಲಿ ಕುದುರೆ ಸವಾರಿಲಿ ದೇವಸ್ಥಾನಕೆ ತಲ್ಪಿಸಿ, ಅಲ್ಲಿಂದ ದೇವ್ರು ತೀರ್ಥ, ಹೂ, ಪ್ರಸಾದನ ಅರಮನೆಗೆ ಕಳ್ಸುವ ವಾಡಿಕೆ ಇತ್ತ್. ಹಂಗೆ ಒಂದ್ ಸಲ ಅರಮನೆಗೆ ಕಳ್ಸಿದ ಹೂ ಮಾಲೆಲಿ ತಲೆ ಕೂದಲ್‌ನ ಕಂಡ ಅರಸ ಆ ಬಗೆಲಿ ತಂತ್ರಿಗಳ್ಲಿ ವಿಚಾರ್ಸ್‌ಕನ ತಂತ್ರಿಗ ಅಂಬೆರ್ಪುಲಿ ಅದ್ ಮೂಕಾಂಬಿಕೆದೇ ಇರೋಕು ತಾ, ಹಂಗೆನೇ ರಾಜಂಗೆ ತಿಳ್ಸಿಬುಡು ತಾ ಧೂತಂಗೆ ಹೇಳಿ ಕಳ್ಸಿತ್. ಹಂಗೆ ಹೇಳದೆ ತಂತ್ರಿಗಳ್ಗೆ ಬೇರೆ ದಾರಿ ಇತ್ಲೆ.

ವಿಷಯ ಆದ್ ಇಷ್ಟೆ, ಅಂದ್ ಮಾಮೂಲು ಹೊತ್ತ್‌ಗೆ ಅರಮನೆಂದ ಕುದುರೆ ಸವಾರಿ ಬಾತ್ಲೆ, ಇನ್ನ್ ಬಾದ್ಲೆ ತಾ ಗ್ಯಾನ ಮಾಡಿ ಹೂ ಮಾಲೆನ ಅವನ ಹೆಣ್ಣ್‌ಗೆ ಮುಡಿಯಕೆ ಕೊಟ್ಟದೆ. ಅವ್ಳ್ ಮುಡ್ದ ಸೊಲ್ಪ ಹೊತ್ತ್‌ಲೇ ಅರಮನೆಂದ ಕುದುರೆ ಸವಾರಿಲಿ ಧೂತ ಬಂದೇ ಬುಟ್ಟದೆ.

ಪ್ರಸಾದದ ಒಟ್ಟಿಗೆ ಹೂನ ಕೊಡಿಕೆ ತಂತ್ರಿ ಒಟ್ಟಿಗೆ ಹೂ ಇರ್ದುಲೆ. ಹೂ ನೋಡ್ರೆ ಹೆಣ್ಣ್‌ನ ಮುಡಿಲಿ ಉಟ್ಟು. ಎಂಥ ಮಾಡ್ದು ಈಗ? ವಿಸಯನ ಹೆಣ್ಣ್‌ಗೆ ತಿಳ್ಸಿ ಅವ್ಳ ಮುಡಿಲಿದ್ದ ಹೂಮಾಲೆನ ಪ್ರಸಾದದೊಟ್ಟಿಗೆ ಅರಮನೆಗೆ ಕಳ್ಸಿ ಕೊಟ್ಟದೆ. ಹೂಮಾಲೆ ತೆಗ್ಯಕನ ಗಾಬರಿಲಿ ಒಂದು ತಲೆ ಕೂದಲ್ ಹೂಮಾಲೆಲೆ ಸಿಕ್ಕಿಕಂಡದೆ. ಈಗ ತಂತ್ರಿಗ ಇನ್ನೂ ಪೇಚ್‌ಗೆ ಸಿಕ್ಕಿಕಂಡೊ. ಅದ್ ದೇವಿನ ಕೂದಲ್‌ತ ಹೇಳ್ದೆ ಬೇರೆ ವಿಧಿನೇ ಇಲ್ಲೆ. ಹೆಂಗೂ ತಲೆ ಹಾರುವ ಇಕ್ಕಟ್‌ಲಿ ಸಿಕ್ಕಿಕಂಡೊಳೊ.

ಒಂದೋ ತಂತ್ರಿಗ ದೇವನ ತಲೆಕೂದಲ್ ದೇವಸ್ಥಾನಲಿ ತೋರ್ಸಕು, ಇಲ್ಲೆ ತೇಳ್ರೆ ಅರಸ ಕೊಡೋ ಉಗ್ರ ಶಿಕ್ಷೆನ ಅನುಭವಿಸೊಕು. ರಾಜ ದೇವರ ಮೇಲೆ ಭಾರ ಹಾಕಿ ಸುಮ್ಮನೆ ಇದ್ದಿದ್ರೆ ಏನ್ ಸ ಆಗ್ತಾ ಇತ್ಲೆ, ಆದ್ರೆ ರಾಜ ಇದರ ಪರೀಕ್ಷೆಗೆ ಸಂಕಲ್ಪ ಮಾಡ್ತ್. ಇಂತ ಒಂದು ಘಟನೆ, ನಂಬಿಕೆ ದ್ರೋಹ ಆಗಿ ತಿರ್ಗಿದೆ ತಾ ತಂತ್ರಿ ನೆನ್ಸಿತ್ಲೆ. ಈಗ ಅವನೇ ಹೋಗಿ ತಪ್ಪು ಒಪ್ಪಿಕಂಡರೂ ಶಿಕ್ಷೆ ತಪ್ಪಿದಲ್ಲ. ಈಗ ರಾಜಂಗೆ ದೇವಿನ ತಲೆ ಕೂದ್ಲು ತೋರ್ಸೊಕು ಇಲ್ಲರೆ ರಾಜ ಕೊಡೊ ಶಿಕ್ಷೆನ ಅನುಭವಿಸೊಕು. ಬೇರೆ ದಾರಿ ಕಾಣದೆ ಆತ್ಮಹತ್ಯೆನೇ ಪರಿಹಾರತ ನಿರ್ಧರಿಸಿತ್. ಹಿಂಗೆ ಒಂದು ರಾತ್ರಿ ಸೌಪರ್ನಿಕಾ ಹೊಳೆ ದಂಡೆಲಿ ಕುದ್ದ್‌ಕಂಡ್ ದುಃಖಿಸ್ತಾ ಇದ್ದದೆ. ಆ ಹೊತ್ತ್‌ಗೆ ಮಹಾತಾಯಿ ಮೂಕಾಂಬಿಕೆನೇ ಒಂದು ಮುತ್ತೈದೆ ವೇಸಲಿ ಬಂದ್ ತಂತ್ರಿಗಳ ದುಃಖನ ವಿಚಾರ್ಸಿ ಸಮಾಧಾನ ಮಾಡಿ, ಅಭಯ ಇತ್ತ್, ಶುಕ್ರವಾರ ರಾಜನ ಪೂಜೆಗೆ ಬಾಕೆ ಹೇಳ್ ತ ಹೇಳ್ದೆ. ಪೂಜಾ ಹೊತ್ತ್‌ಲಿ ಒಂದು ಕಣ್ಣ್ ಮುಚ್ಚಿ ದೇವಿನ ನೋಡಲಿ ಆಗ ಅವಂಗೆ ದೇವಿಯ ತಲೆ ಕೂದಲ್ ಕಂಡದೆ ತಾ ಹೇಳಿ ಅದೃಶ್ಯ ಆದೆ. ತಂತ್ರಿಗಳ್ಗೆ ದೇವಿಯೇ ಬಂದ್ ಅಭಯ ನೀಡ್ದ ಅನುಗ್ರಹ ಪ್ರಾಪ್ತ ಆತ್ ತೇಳಿ ಆನಂದಾಶ್ಚರ್ಯಂದ, ರಾಜಂಗೆ ಮುಂದಿನ ಶುಕ್ರವಾರ ಮೂಕಾಂಬಿಕೆಯ ಕೂದಲ್ ದರ್ಶನಕ್ಕೆ ಬಾಕೆ ತಿಳ್ಸಿತ್.

ಅಂದ್ ಶುಕ್ರವಾರ ರಾತ್ರಿ ರಾಜ ಪರಿವಾರ ಸಮೇತ ಗರ್ಭಗುಡಿಯ ಹೊರಗೆ ಲಕ್ಷ್ಮಿ ಮಂಟಪಲಿ ಪೂಜೆನ ನೋಡ್ತಾ ಇರ್ಕನ ಗರ್ಭಗುಡಿಂದ ಬಿಚ್ಚಿದ ತಲೆ ಕೂದಲ ರಾಶಿನೇ ಹೊರಗೆ ಬಂದ್ ರಾಜನ ಮುಖಕ್ಕೆ ನೋಡ್ತಾ ಇದ್ದ ಕಣ್ಣಿಗೇ ಬಡ್ದಂಗೆ ಆಗಿ ಅಂವ ಅಲ್ಲೇ ಮೂರ್ಚೆ ಹೋದೆ. ಕಡೆಗೆ ಎದ್ದ್ ದೇವಿಯ ಕೂದಲ್ನ ನೋಡ್ದೆ, ಪರೋಕ್ಷವಾಗಿ ಇದನ್ನ ನಂಬದ ಕಾರಣ ನೋಡ್ದ ಕಣ್ಣ್ ದೃಷ್ಟಿಹೀನ ಆದೆ. ತಂತ್ರಿಗಳ್ನ ಅನುಮಾನ್ಸಿದಕೆ ಅವರ ಬಳಿ ಕ್ಷಮೆ ಕೇಳಿ, ಅರಮನೆಗೆ ಕರ್ಸಿ ಸನ್ಮಾನ ಮಾಡ್ದೊ ತಾ ಪ್ರತೀತಿ.

# ಸಿನ್ಮ



-ಹೊಳೆಕೆರೆ ರಾಮಪ್ಪ

ಅಪ್ಪ ಅಮ್ಮ ಗುರುಹಿರಿಯರ ಆಶೀರ್ವಾದದೊಟ್ಟಿಗೆ

**ಕೃತಜ್ಞತೆಗ**

ಶ್ರೀ ಯೋಗಿರಾಜ್ ವೇದಾದ್ರಿ ಮಹರ್ಷಿ–ಆಧ್ಯಾತ್ಮ ಗುರು–ಕೊಯಂಬತ್ತೂರ್
ಶ್ರೀ ಸ್ವಾಮಿ ಜಗದಾತ್ಮಾನಂದ–ಆಧ್ಯಾತ್ಮ ಚಿಂತಕರ್–ಶ್ರೀ ರಾಮಕೃಷ್ಣ–ವಿವೇಕಾನಂದ ಆಶ್ರಮ–ಪೊನ್ನಂಪೇಟೆ
ಶೀಮತಿ ಖೋರ್‌ಶೆಡ್ ಭಾವ್‌ನಾಗ್ರಿ–ಮುಂಬೈ–ಲೇಖಕಿ–ದಿ ಲಾ (ಸ್) ಆಫ್ ಸ್ಪಿರಿಟ್ ವರ್ಡ್

**ಸಿನ್ಮನ ಸೃಷ್ಟಿ ಮಾಡ್‌ವವ್**



**ಚಿತ್ರಕತೆ ಪರಿಕಲ್ಪನೆ : ಹೊಳೆಕರೆ ಚೆಂಗಪ್ಪ – ಕಳತ್ಮಾಡು**

**ಭಾಗ–೧**

### ಕಷ್ಟ ಸುಖ

ಸೊಲ್ಪ ವರ್ಷದ ಹಿಂದೆ ಕೊಡ್‌ಗ್‌ನ ಗದ್ದೆಗಳ್‌ಲಿ ಎಲ್ಲಿ ನೋಡಿರೂ ಹಸುರ್ ಬೆಳೆ ಕಾಣ್‌ತಾ ಇದ್ದದೆ. ಮಳೆಗಾಲ ಕಳ್ದ್ ಚಳಿಗಾಲ ಸುರ್ ಆಕನ ಬೆಳೆಗ ಕೊಯ್ಲ್‌ಗೆ ಬಂದವೆ. ಬಿಕೆಬಿ ಕೊಯ್ಲ್‌ಗೆ ಬಾಕೆ ಸಲ್ಪ ತಡ ಆದೆ. ದೊಡ್ಡಿ ಇಂಟಾನ್ ಮತ್ತೆ ಪೊರಿಕಳ್ಮೆ ಬೆಳೆಗ ಬೇಗ ಕೊಯ್ಲ್‌ಗೆ ಬಂದವೆ. ಬಂಗಾಳ ಕೊಲ್ಲಿಲಿ ಚಂಡಮಾರುತ ಬಾಕನ ಇಲ್ಲಿಯೂ ಮಳೆಗಾಳಿ ಇದ್ದದೆ. ಕೊಯ್ಲ್ ಕೆಲ್ಸ ಆಗಿ ಒಕ್ಲ್ ಹೊಡ್ದ್ ಹುಲ್ಲುಮುಂಡ ಮೆಟ್ಟುವರ್‌ಗೆ ಮಳೆಗೆ ಹೆದ್ರಿಕಂಡೆ ಕೆಲ್ಸ ಮಾಡೊಕು. ಒಕ್ಲ್ ಹೊಡ್ದ್ ಹುಲ್ಲು ಕಟ್ಟಿಕಿಂತ ಮುಂದೆ ಮಕ್ಕ ಹುಲ್ಲ್‌ಲಿ ಆಟ ಆಡುದು, ತಲೆ ಕೆಳ್ಗೆ ಮಾಡಿ ಕಾಲ್ ಮೇಲೆ ಮಾಡ್ದು, ರಾಜಕುಮಾರ್, ಎಮ್‌ಜಿಆರ್ ಸ್ಟೈಲ್ ಫೈಟಿಂಗ್ ಮಾಡ್ದು ಮೈ ಕೈ ಗೀರಿ ಗಾಯ ಮಾಡಿಕಂಬದ್ ಎಲ್ಲಾ ಮಾಮೂಲ್. ವಾರಕ್ಕೆ ಒಂದ್ ಸಲ ಮೀಯೊದ್ರಂದ ಬಚಾವ್. ಒಂದ್ ಸಲ ಉರಿ ತಡ್‌ಕಂಡ್‌ರೆ ಆತ್.

### ಗೌಜಿ ಗಮ್ಮತ್

ಒಂದ್ ವರ್ಷ, ಕಡೇ ಒಕ್ಲು ದಿನ ಕೋಳಿ ಮಾಸ ಗೈಪು ಮಾಡಿ ಗದ್ದಳ ಮಾಡಿದ್ದೊ. ಎರ್ಡ್ ಕುಪ್ಪಿ ಎನ್ ಎಸ್ ಇದ್ದರ್‌ಂದ ಕುಡಿಯವರ ಮುಖಲಿ ಕುಸಿ ಕಾಣ್ತಾ ಇತ್ತ್. ಉಂಡಾಕನ ಹನ್ನೊಂದ್ ಗಂಟೆ ಆಗೋತ್. ನಮ್ಮ ಅಣ್ಣಯ್ಯ ಅಜ್ಜಂಗೆ ಮಾಮುಲ್‌ಗಿಂತ ಸಲ್ಪ ಜಾಸ್ತಿನೇ ಆಗಿತ್ತ್ ಕಂಡದೆ. ಚಾಮಿ ಹೈದನೊಟ್ಟಿಗೆ ಕಳಲಿ ಬತ್ತ ಪಾರ ಕಾಯಕೆ ಕಂಬುಳಿಂದ ಗುಡಿ ಹೊದ್ದ್ ಬೇಗ ಮಲ್ಕಂಡ್ತ್. ಚಾಮಿ ಹೈದ ಬಿಕೆಬಿ ಗದ್ದೆ ಕಡೆ ನೋಡ್‌ಕನ ಒಂದ್ ಬೆಳ್ಕ್ ಬಾದು ಕಾಣ್ಸಿತ್. ಅಜ್ಜಂಗೆ ಹೇಳ್ಕನ, ಅದ್ ಕೊಳ್ಳಿದೆವ್ವ, ಮಾತ್ ಕೇಳ್ರೆ ಇಲ್ಲಿಗೂ ಬಾದು, ನೀನ್ ಸುಮ್ಮನೆ ಮಲ್ಕಂತ ಹೆದ್ರಿಸಿದೊ.

### ನಕ್ಷತ್ರ ಮತ್ತೆ ನಕ್ಷತ್ರ ಪುಂಜ

ಆಕಾಸ ನೋಡ್ತಾ ಮಲ್ಗಿದ ಚಾಮಿಗೆ ಸಪ್ತರ್ಷಿ ಮಂಡಲ, ಅದ್ರ ಹತ್ರ ಮೂರ್ ನಕ್ಷತ್ರಗ ಒಂದೇ ಸಾಲ್‌ಲಿ ಇರ್ದು ಕಂಡದೆ. ಅವನ ಗ್ಯಾನ ಸ್ಕೂಲ್ ಕಡೆ ಹೋದೆ. ಅವನ ವಿಜ್ಞಾನ ಮಾಸ್ಟ್ರ್ ಹೇಳ್ತಾ ಇತ್, ಆಕಾಸಲಿ ಕೋಟ್ಯಾಂತರ ನಕ್ಷತ್ರಗ ಒಳೊ. ಅವು ಭೂಮಿಂದ ಲಕ್ಷಾಂತರ ಜೋತಿರ್ವರ್ಷ ದೂರ ಇದ್ದವೆ. ವಿಜ್ಞಾನಿಗ ನಕ್ಷತ್ರಗಳ ದೂರನ ಜ್ಯೋತಿರ್ವರ್ಷಲಿ ಹೇಳುವೆ. ಒಂದ್ ಜ್ಯೋತಿರ್ವರ್ಷತೇಳಿರೆ, ಬೆಳ್ಕ್ ಒಂದ್ ಸೆಕೆಂಡ್‌ಗೆ ಮೂರ್ ಲಕ್ಷ ಕಿಲೋ ಮೀಟರ್ ಸ್ಪೀಡ್‌ಲಿ ಒಂದ್ ವರ್ಷಲಿ ಹೋಗಿ ಮುಟ್ಟುವ ದೂರ. ಅದ್ ಸುಮಾರ್ ಒಂಬತ್

ಟ್ರಿಲಿಯನ್ ಕಿಲೋಮೀಟರ್. ಅಂದರೆ ಒಂಬತ್ತರ ಮುಂದೆ ಹನ್ನೆರಡ್ ಸೊನ್ನೆಗ ! ನಕ್ಷತ್ರಗಳ ಗುಂಪಿಗೆ "ನಕ್ಷತ್ರಪುಂಜ"ಂತ ಹೇಳ್ವೆ. ಒಂದ್ ನಕ್ಷತ್ರಪುಂಜಲಿ ಹತ್ ಸಾವಿರ ಕೋಟಿಗಿಂತ ಹೆಚ್ಚ್ ನಕ್ಷತ್ರಗ ಇದ್ದವೆ. ಬ್ರಹಾಂಡಲಿ ಹತ್ ಸಾವಿರ ಕೋಟಿಗಿಂತ ಹೆಚ್ಚ್ ನಕ್ಷತ್ರಪುಂಜಗ ಒಳೊ. ಭೂಮಿಗೆ ಹತ್ರ ಇರ್ವ ನಕ್ಷತ್ರದ ದೂರ ನಾಲ್ಕ್‌ವರೆ ಜ್ಯೋತಿರ್ವರ್ಷ. ಮಡಿಕೇರಿಲಿ ಬಸ್ ಹತ್ತಿರೆ ಆ ನಕ್ಷತ್ರನ ಮುಟ್ಟಿಕೆ ಸುಮಾರ್ ನಾಲ್ಕ್‌ವರೆ ಕೋಟಿ ವರ್ಷ ಆದೆ ! ನಮ್ಮೆಗ ಹತ್ರ ಇರ್ವ ನಕ್ಷತ್ರಪುಂಜನ ಮುಟ್ಟಿಕೆ ಎರ್ಡ್ ಲಕ್ಷ ನಲ್ವತ್ ಸಾವಿರ ಕೋಟಿ ವರ್ಷ ಆದೆ !

**ದೇವ್ರ್‌ದ್ ಪರಿಕಲ್ಪನೆ**

ಬ್ರಹಾಂಡನ ಮನ್ಸನ ಸರೀರಕ್ಕೆ ಹೋಲ್ಸಿರೆ, ವಿಜ್ಞಾನಿಗಳ್ಗೆ ಒಂದ್ ಅಂಗೈ ಅಗಲದಷ್ಟ್ ಜಗತ್ ಮಾತ್ರ ಗೊತ್ತಾಗಿರ್ದುಂತ ಅವ್ವೇ ಹೇಳ್ವೆ. ಬ್ರಹ್ಮಾಂಡನ ಶ್ರೀಮಹಾವಿಷ್ಣುದ್ ಸರೀರಾಂತ ಮಹರ್ಷಿಗ ಹೇಳಿಯೊಳೊ. ಅಂದರೆ ವಿಷ್ಣು ಕೈಲಿರುವ ಚಕ್ರ ವಿಜ್ಞಾನಿಗಳ್ಗೆ ಗೊತ್ತಿರ್ವ ಅಂಗೈ ಅಗಲದಷ್ಟ್ ಜಗತ್ತ್ ! ಈ ಸಣ್ಣ ಜಗತ್ತೊಳಗೆ ನಾವು ಇರ್ದು. ಭಗವದ್ಗೀತೆಲಿ ಶ್ರೀಕೃಷ್ಣ ಅರ್ಜುನಂಗೆ ಹೇಳ್ದೆ, ನೀ ಕಾಣುವ ಪ್ರಪಂಚ ನನ್ನ ಸರೀರದ ಒಂದ್ ಮೂಲೆಲಿ ಉಟ್ಟೊಂತ. ಬೆಟ್ಟದ ಮೇಲೆ ನಿತ್ತಕ್ಕೆ ಬೆಟ್ಟ ಹೆಂಗೆ ಕಾಂಬದ್ಲೆಯೊ ಹಂಗೆ ಮಹಾವಿಷ್ಣುದ್ ಸರೀರದ ಮೂಲೆಲಿ ಇರ್ವ ನಮ್ಮೆಗ ಮಹಾವಿಷ್ಣು ಕಾಂಬೊದುಲ್ಲೆ. ಅದ್ಕೆ ದೇವ್ರ್ ಅವತಾರ ಎತ್ತಿ ತನ್ನಲಿರ್ವ ದೊಡ್ಡ ಬೆಂಕಿ ಕೆಂಡದಷ್ಟ್ ಬಲನ ಸಣ್ಣ ಕಿಡಿಯಷ್ಟ್ ತೋರ್ಸಿ ನಮ್ಮೆಗ ಸಮಾದಾನ ಕೊಟ್ಟದೆ.

**ಅವತಾರ**

ಅವತಾರದ್ ಮಾತ್ ಬಾಕನ, ಶ್ರೀಕೃಷ್ಣನ ಕೆಲವ್ ಜನ ಅವತಾರತ ಹೇಳ್ವೆ, ಕೆಲವ್ ಜನ ಅಂವ ಮನ್ಸ ಅಂತ ಹೇಳ್ವೆ. ಶ್ರೀಕೃಷ್ಣನ ಮನ್ಸಾಂತ ಒಪ್ಪಿಕಂಡರೂ ಅವ್ ವಿದ್ಯಾವಂತರ್. ಅಂದರೆ ನಾವ್ ವಿದ್ಯಾವಂತರ್ ಅಲ್ಲನಾ ? ಅಲ್ಲಾಂತ ಹೇಳಿದ್ದೊ ಶ್ರೀರಾಮಕೃಷ್ಣ ಪರಮಹಂಸ. ಅವರ ಪ್ರಕಾರ ಆಧ್ಯಾತ್ಮ ವಿದ್ಯೆ ಮಾತ್ರ ವಿದ್ಯೆ. ಆಧ್ಯಾತ್ಮ ವಿದ್ಯೆ ಪ್ರಕೃತಿ ನಿಯಮದ್ ತಿಳುವಳಿಕೆ ಕೊಡ್ಸಿ, ಒಳ್ಳೆದ್ ಕೆಟ್ಟದ್ ಗೊತ್ತಾಗುವಂಗೆ ಮಾಡ್ದೆ. ನಾವ್ ಹೊಟ್ಟೆಪಾಡಿಗೆ ಕಲಿವ ವಿದ್ಯೆ ಅವಿದ್ಯೆ. ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮತ್ತೆ ಶ್ರೀ ಶಾರದಾ ದೇವಿ ಸಚ್ಚಿದಾನಂದ ಇವೆಲ್ಲಾ ಸಾಗರಂದ ಭೂಮಿಗೆ ಬಂದ್ ಜನಕ್ಕೆ ಆಧ್ಯಾತ್ಮ ವಿದ್ಯೆದ್ ತಿಳುವಳಿಕೆ ಕೊಟ್ಟೋಳೊ.

**ವಿದ್ಯೆ-ಅವಿದ್ಯೆ**

ವಿದ್ಯೆ ಟೀವಿ ಇದ್ದಂಗೆ. ಟೀವಿಲಿ ಇರ್ವ ಆ್ಯಂಟನೊ ಬೇರೆ ಬೇರೆ ದೂರದರ್ಶನ ಕೇಂದ್ರಂದ ಬುಟ್ಟ ಬೆಳ್ಕ್ ಮತ್ತೆ ಸದ್ದ್‌ದ್ ಸೂಕ್ಷ್ಮ ಅಲೆಗಳ್ನ ಎಳ್ಕಂಡ್ ಬೇರೆ ಬೇರೆ ಚ್ಯಾನಲ್‌ಗಳ್ಲಿ ದೃಶ್ಯಗಳ್‌ನ ತೋರ್ಸಿದೆ. ನಮ್ಮ ಮೆದುಳ್‌ಲಿ ಪೀನಲ್ ಗ್ರಂಥಿತೇಳುವ ಒಂದ್ ಸೂಕ್ಷ್ಮ ಆ್ಯಂಟನೊ ಉಟ್ಟು. ಆಧ್ಯಾತ್ಮ ವಿದ್ಯೆಲಿ ಬರುವ ಯೋಗ-ಧ್ಯಾನ ನಮ್ಮ ಚಂಚಲ ಮನ್ಸ್‌ಗೆ ಮೂಕುದಾರ ಹಾಕಿ, ಪೀನಲ್ ಗ್ರಂಥಿನ ಪಳ್ಗಿಸಿ, ನಿದ್ದೆ ಅವಸ್ಥೆಲಿರ್ವ ನಮ್ಮ ಆರನೇ ಇಂದ್ರಿಯನ ಎಚ್ಚರ ಮಾಡ್ಸಿದೆ. ಆರನೇ ಇಂದ್ರಿಯ ಪ್ರಕೃತಿ ನಿಯಮದ್ ತಿಳುವಳಿಕೆ ಕೊಡ್ಸಿದೆ. ಅವಿದ್ಯೆತೇಳಿರೆ ಪುಸ್ತಕಲಿ ಬರ್ದದರ್ನ ಬಾಯ್ ಪಾಠ ಮಾಡಿ ಒಪ್ಪುಸುದು. ಇದ್ ಸಿನ್ಮ ಟಾಕೀಸ್‌ಲಿರ್ವ ಪರ್ದೆ ತರ. ಪರ್ದೆ ಪ್ರೊಜೆಕ್ಟರ್‌ಂದ ಬುಡುವ ರೀಲ್‌ಲಿರ್ವ ಸಣ್ಣ ದೃಶ್ಯಗಳ್‌ನ ದೊಡ್ಡದಾಗಿ ತೋರ್ಸಿದೆ.

**ಪದ**

ಅವಿದ್ಯೆ ಅವಿದ್ಯೆ, ನಿನ್ನ ಕಾಲಿಗೆ ಬಿದ್ದೆ

ನೀನ್ ಇದ್ದರೆ, ಇದ್ದದೆ ವಿದ್ಯೆ

ವಿದ್ಯೆಯಿಲ್ಲದೆ ಅವಿದ್ಯೆ, ನೀನ್ ಬರೀ ನಿದ್ದೆ

**ರಕ್ತ ಸಂಮಂಧ**

ನಕ್ಷತ್ರಗಳ್‌ನ ನೋಡ್ತಾ ಇದ್ದ ಚಾಮಿಗೆ ಇನ್ನೊಂದ್ ಸಂಗತಿ ಗ್ಯಾನ ಬಾತ್. ಭೂಮಿಲಿ ಒಂದ್ ಗುಲಾಬಿ ಹೂನ ಕೊಯ್ದರೂ, ಬ್ರಹಾಂಡಲಿರ್ವ ಎಲ್ಲಾ ನಕ್ಷತ್ರಗಳ್ಗೂ ಭಂಗ ಆದೆ. ಬ್ರಹಾಂಡಲಿರ್ವ ಎಲ್ಲಾ ವಸ್ತುಗ, ಜೀವಿಗ ಮತ್ತೆ ಮನ್ಸರ ಮಧ್ಯೆ ರಕ್ತ ಸಂಮಂಧ ಉಟ್ಟು. ಸಂಮಂಧ ಇದ್ದರೂ ಜನಗ ಹೊಡ್ದಾಟ ಬಡ್ದಾಟ ಮಾಡಿಕಂಡವೆ. ಏಕೆ ?

**ಮನ್ಸ ಮಾಡುವ ಸಿನ್ಮ**

ಮೂರ್ ಗಂಟೆದ್ ಒಂದ್ ಸಿನ್ಮಲಿ ಒಬ್ಬ ಗರೀಬ ಹೈದ, ಅನುಕೂಲಸ್ತ ಮನೆ ಗೂಡೆನ ಪ್ರೀತಿ ಮಾಡ್ದು. ಗೂಡೆದ್ ಅಪ್ಪ ರೌಡಿಗಳ್ನ ಬುಟ್ಟು ಹೈದಂಗೆ ಹೊಡ್ಸುದು. ಹೈದ ಗೂಡೆದ್ ಮನೆಗೆ ನುಗ್ಗಿ ರೌಡಿಗಳ್ನ ಚಚ್ಚಿ ಗೂಡೆನ ಕರ್ಕಂಡ್ ಬಾದು. ಇಬ್ಬರೂ ಸೇರಿ ಪದ ಹೇಳ್ದು,

ಕುಣಿಯದು. ಈ ಹೊಡ್ಡಾಟ ಬಡ್ಡಾಟದ ಸಿನ್ಮ, ಟಾಕೀಸ್‌ಲಿ ನೂರ್ ದಿನ ಓಡ್ದೆ. ಹತ್ರ ಇರ್ವ ಟಾಕೀಸ್‌ಲಿ "ಬೇಡರ ಕಣ್ಣಪ್ಪ" ಸಿನ್ಮನೋ "ಭಕ್ತ ಕನಕದಾಸ" ಸಿನ್ಮನೋ ಹಾಕಿರೆ ಮೂರ್ ದಿನ ಓಡ್ರೆ ಹೆಚ್ಚ್!

**ದೇವ್ರು ಮಾಡುವ ಸಿನ್ಮ**

ಈ ನಮ್ಮ ಜೀವನ ಒಂದ್ ನಾಟಕ. ಈ ಪ್ರಪಂಚ ರಂಗಮಂದಿರ. ದೇವ್ರ್ ಸೂತ್ರಧಾರಿ. ನಾವೆಲ್ಲ ಪಾತ್ರಧಾರಿಗಾಂತ ಹೇಳ್ವೆ. ನಮ್ಮ ಜೀವನ ನಾಟಕನ ನೂರ್ ವರ್ಷದ ಸಿನ್ಮಂತ ಹೇಳಕ್. ಮೂರ್ ಗಂಟೆ ಸಿನ್ಮಲಿ ಜನ ಏನ್ ನೋಡಿಕೆ ಇಷ್ಟ ಪಟ್ಟವೆಯೊ, ನೂರ್ ವರ್ಷದ ಸಿನ್ಮಲಿಯೂ ದೇವ್ರ್ ಅದೇ ಹೊಡ್ಡಾಟ ಬಡ್ಡಾಟನ ಮಡ್ಗಿದ್ದದೆ.

**ಹುಟ್ಟು ಗುಣ – ವೃತ್ತಿ ಗುಣ**

ನೂರ್ ವರ್ಷದ ಸಿನ್ಮಲಿ ಕೇಡಿಗ ಪ್ರಾಮಾಣಿಕರಾಗಿ ಪಾತ್ರ ಮಾಡ್ವೆ. ಒಬ್ಬ ಕೇಡಿ ಸುಳ್ಳ ಇದ್ದದೆ. ಅಂವ ಸುಳ್ ಹೇಳುದರ್ಲಿ ಭಾರೀ ನಿಸೀಮ. ಏಕೆತೇಳಿರೆ ಸುಳ್ ಹೇಳ್ದು ಅಂವನ ಹುಟ್ಟುಗುಣ. ಒಳ್ಳೆಯವರ ಪಾತ್ರ ಮಾಡವ್ ಪ್ರಾಮಾಣಿಕರಾಗಿ ಪಾತ್ರ ಮಾಡುದ್ ಗುಮಾನಿ ! ಒಬ್ಬ ಪೋಲೀಸ್ ಇದ್ದದೆ. ಅಂವ ಕಳ್ಳನ ಖಂಡಿತಾಗಿ ಹಿಡ್ದದೇಂತ ಹೇಳಿಕೆ ಆದುಲ್ಲೆ. ಯಾಕೆಂತೇಳ್ರೆ ಅಂವಗೆ ಎರ್ಡ್ ಗುಣಗ ಇದ್ದವೆ. ಒಂದ್ ಹುಟ್ ಗುಣ, ಇನ್ನೊಂದ್ ವೃತ್ತಿ ಗುಣ. ಅಂವನ ಹುಟ್ ಗುಣ ಮತ್ತೆ ವೃತ್ತಿ ಗುಣಲಿ ಹೊಂದಾಣಿಕೆ ಇರ್ದು ಅಪರೂಪ. ಅಂತವ್ ಕೋಟಿಗೊಬ್ಬ!

**ಪ್ರತಿಫಲ**

ಮೂರ್ ಗಂಟೆದ್ ಸಿನ್ಮಲಿ ಪಾತ್ರ ಮಾಡ್ದವ್ಕೆ ಅವರವರ ಪಾತ್ರಕ್ಕೆ ಪ್ರತಿಫಲ, ದುಡ್ ಸಿಕ್ಕಿದೆ. ನೂರ್ ವರ್ಷದ ಸಿನ್ಮಲಿ ಪಾತ್ರ ಮಾಡ್ದವ್ಕೆ ಅವರವರ ಪಾತ್ರಕ್ಕೆ ಪ್ರತಿಪಲ, ಸಂಸ್ಕಾರ ಸಿಕ್ಕಿದೆ. ಯಾರ್ ಪ್ರಕೃತಿ ನಿಯಮದ ಪರ ಪಾತ್ರ ಮಾಡುವೆಯೊ ಅವ್ ಒಳ್ಳೆ ಸಂಸ್ಕಾರ ಪಡ್ದವೆ. ಯಾರ್ ಪ್ರಕೃತಿ ನಿಯಮದ ವಿರೋದ ಪಾತ್ರ ಮಾಡುವೆಯೊ ಅವ್ ಕೆಟ್ಟ ಸಂಸ್ಕಾರ ಪಡ್ದವೆ.

**ನಾಳೆದ್ ಜಲ್ಮ ಮತ್ತೆ ಜಲ್ಮ ಪೂರೈಸುದು**

ಮನ್ಸ ಸತ್ತ ಮೇಲೆ ಕಣ್ಣಿಗೆ ಕಾಣುವ ಸರೀರನ ಭೂಮಿಲಿ ಬುಟ್ಟು ಸೂಕ್ಷ್ಮ ಸರೀರಲಿ ಅವರವರ ಸಂಸ್ಕಾರಕ್ಕೆ ಸರಿಯಾಗಿ ಸ್ವರ್ಗ ನರ್ಕಕ್ಕೆ ಹೋಗಿ ಅಲ್ಲಿ ಪಾತ್ರನ ಮುಂದುವರ್ಸುವೆ. ಒಳ್ಳೆ ಸಂಸ್ಕಾರ ಪಡ್ದವ್ ಮೇಲೆ ಸ್ವರ್ಗಕ್ಕೆ ಹೋದವೆ. ಕೆಟ್ಟ ಸಂಸ್ಕಾರ ಪಡ್ದವ್ ಕೆಳ್ಗೆ ನರ್ಕಕ್ಕೆ ಹೋದವೆ. ಸ್ವರ್ಗ ನರ್ಕಲಿ ಒಳ್ಳೆದ್–ಕೆಟ್ಟದ್ ಪಾತ್ರಗ ಇರ್‌ದುಲ್ಲೆ. ಅಲ್ಲಿ ಇರ್ದು ಗುರು–ಶಿಷ್ಯರ ಪಾತ್ರಗ. ಒಳ್ಳೆ ಸಂಸ್ಕಾರ ಪಡ್ದ್ ಸ್ವರ್ಗಕ್ಕೆ ಹೋದವ್ ಅಲ್ಲಿ ಗುರುಗಳ ಪಾತ್ರ ಮಾಡ್ವೆ. ಕೆಟ್ಟ ಸಂಸ್ಕಾರ ಪಡ್ದ್ ನರ್ಕಕ್ಕೆ ಹೋದವ್ ಅಲ್ಲಿ ಶಿಷ್ಯರ ಪಾತ್ರ ಮಾಡ್ವೆ. ಸ್ವರ್ಗಲಿರುವ ಗುರುಗ, ನರ್ಕಲಿ ಇರ್ವ ಶಿಷ್ಯರ್ಗೆ ಸಾಯ ಮಾಡಿ ಅವರಲ್ಲಿರ್ವ ಕೆಟ್ಟ ಸಂಸ್ಕಾರನ ಹೋಗ್ಸಿ ಒಳ್ಳೆಯ ಸಂಸ್ಕಾರವಂತರನ್ನಾಗಿ ಮಾಡ್ಸುವೆ. ಪ್ರೀತಿ ಮತ್ತೆ ಕರುಣೆಂದ ಅವರ ಕೈಗಳ್‌ನ ಹಿಡ್ದ್ ಸ್ವರ್ಗಕ್ಕೆ ಎಳ್ಕಂಡವೆ. ಮತ್ತೆ ಅವ್ ಎಲ್ಲಾ ಸೇರಿಕಂಡ್ ಇನ್ನೂ ಮೇಲೆ ಇರ್ವ ತಪೋ ಲೋಕಕೆ ಹೋದವೆ. ಅಲ್ಲಿ ತಪಸ್ ಮಾಡಿ ಇರ್ವ ಎಲ್ಲಾ ಒಳ್ಳೆ ಸಂಸ್ಕಾರನ ಸತ ಕಾಲಿ ಮಾಡಿಕಂಡವೆ. ಸಂಸ್ಕಾರ ಕಾಲಿ ಆದಂಗೆ ಅವರ ಸೂಕ್ಷ್ಮ ಸರೀರಗ ಚುರುಂಗಿ ಅಣುಸರೀರ ಆದವೆ. ಆ ಸರೀರಂದ ಎಲ್ಲವ್ ಕುಸೀಂದ ನೆಗಾಡಿಕಂಡ್, ತಬ್ಬಿಕಂಡ್, ಸುತ್ತಾಡಿಕಂಡ್ ಶ್ರೀಮಹಾವಿಷ್ಣುನ ಒಟ್ಟಿಗೆ ಒಂದಾಗಿಬುಟ್ಟವೆ.

**ಚಾಮಿದ್ ಪಾಡ್ !**

ಕೊಟ್ಟಿಗೆಲಿ ಸದ್ ಕೇಳ್ತ್, ಚಿಮ್ಮಿ ಕಡ್ಸ್ ಕರು ಹಾಕಿಕೆ ಆಗುಟ್ಟು. ಒಮ್ಮೆ ನೋಡಿ ಬಾಂತ ಅಮ್ಮ ಹೇಳ್ದುರ್ನ ಕೇಳಿ ಚಾಮಿ ಆಕಾಸಂದ ಭೂಮಿಗೆ ಬಂದದೆ. ಬೆಚ್ಚಂಗೆ ಮಲ್ಗಿದ್ದಂವ ಎದ್ದ್ ಕೊಟಿಗೆಗೆ ಹೋಗಿ ನೋಡ್ದೆ, ಚಿಮ್ಮಿ ಕಡ್ಸ್ ಬಾಯಿ ಅಡ್ಸಿಕಂಡ್ ಅದರ ಪಾಡಿಗೆ ಅದ್ ಮಲ್ಗಿತ್. ಮಧ್ಯರಾತ್ರಿ ಹನ್ನೆರಡ್ ಗಂಟೆ ಆಗಿರ್‌ದು ಕಂಡದೆ. ಅಣ್ಣಯ್ಯಜ್ಜಂಗೆ ಒಳ್ಳೆ ನಿದ್ದೆ. ಹಂಗೆ ಕೊಳ್ಳಿದೆವ್ವದ ಸಂಗತಿ ಏನಾತ್ ನೋಡನಾಂತ ಚಾಮಿ ಲೈಟ್ ತಕಂಡ್ ಒಬ್ಬನೆ ಗದ್ದೆಗೆ ಹೋದೆ. ಬಿಕೆಬಿ ಗದ್ದೆ ಏರಿ ಬರೀಲಿ ಎಂತದೊ ಬಿದ್ದ್‌ಕಂಡಿರ್ದು ಕಂಡದೆ! ಚಾಮಿದ್ ಎದೆ ಹೊಡ್ಕಣ್ಕೆ ಸುರು ಆತ್. ಲೈಟ್ ಹಾಕಿ ನೋಡೋಕ್ ! ಅಷ್ಟೊತ್ತಿಗೆ ಕಾಲ್‌ಗೆ ಪಾಮುಂಜಿ ತರ ಬಳ್ಳಿ ಸುತ್ತಿಕಂಡ್ ಅಂವ ಮುಂಗ್‌ರಿಸಿ ಬಿದ್ದದೆ. ದಮ್ಮ್ ಕಟ್ಟಿ ಬರಿಗೆ ಒಣ್ಕಿದಂವಂಗೆ ಕಣ್ ಕತ್ಲೆ ಬಂದಂಗೆ ಆತ್. ದೊಂಡೆ ಮೇಲೆ ಎಂತದೋ ಬಿದ್ದಂಗಾಗಿ ವಳ್ಳ ಕಿರ್ಚಿದೆ! ದೊಂಡೆ ಆರಿ ಕಿರ್ಚಿಕೆ ಸ್ವರನೇ ಹೊರ್ಡುದುಲ್ಲೆ!



**ಬಾಕಿ ಸಿನ್ಮ ಕಾಫಿ ಕುಡ್ದ್ ಆದ ಮೇಲೆ ಭಾಗ–೨ ಲಿ ಮುಂದ್‌ವರ್ದದೆ............**

# ತುಳುನಾಡ್ನ ದೈವಾರಾಧನೆಲಿ ಗೌಡರ ಪಾತ್ರ

**–ಚರಣ್ ಐವರ್‌ನಾಡ್**

ಸಂಸ್ಕೃತಿ ತೇಳ್ದು ಸಮೂಹ ಸಮ್ಮತ ಜೀವನ ಪದ್ಧತಿ. ಈ ಜೀವನ ಕ್ರಮದ ಒಳ್ಗೆ ಸಮಾಜದ ಎಲ್ಲ ವರ್ಗಗ ನಿರ್ದಿಷ್ಟ ಪಾಲ್‌ನ ಪಡ್ಕಂಡಿದ್ದವೆ. ಹಂಗಾಗಿ ಪ್ರತಿವರ್ಗನೂ ಆ ಸಂಸ್ಕೃತಿನ ಅವಿಭಾಜ್ಯ ಅಂಗಗ. ಅವುಗಳ ಸಂಪೂರ್ಣ ಪಾಲ್‌ದಾರಿಕೆ ಸಂಸ್ಕೃತಿ ಒಂದನ್ನ ಬಹುಮುಖಿಯಾಗಿ ರೂಪಿಸಿದೆ. ತುಳುವರ ದೈವಾರಾಧನೆ, ತುಳುವ ಸಮಾಜದ ಬೇರೆ ಬೇರೆ ಜಾತಿಗಳ, ಸಮುದಾಯಗಳ ಭಾಗವಹಿಸುವಿಕೆಂದ ರೂಪುಗೊಂಡ್ ಬೆಳ್ದ್ ನಿಂತುಟು.

ಧನಿಕ ವರ್ಗ ರಾಜಕೀಯ ಅಧಿಕಾರಂದ ಸಮಾಜದ ವ್ಯವಸ್ಥೆಗಳ ಮೇಲೆ ಹಿಡಿತ ಸಾಧಿಸಿಕಂಡರೆ, ಪುರೋಹಿತ ವರ್ಗ ಧಾರ್ಮಿಕ ಅಧಿಕಾರಗಳ್ನ ಹೊಂದಿ ತುಳುವ ಸಮಾಜದ ಮೇಲ್ತುದಿಲಿ ಒಳೊ. ತುಳುನಾಡ್ನ ಸೀಮೆ, ಮಾಗಣೆ, ಗ್ರಾಮ, ಗುತ್ತು, ಬಾವ ಇದೆಲ್ಲನೂ ಜಾತಿ ಆಧಾರಿತ ಆಡಳಿತ ಘಟಕಗ. ಸೀಮೆ, ಮಾಗಣೆಗ ಜೈನರ ಕೈಲಿದ್ದರೆ, ಗ್ರಾಮ–ಗುತ್ತುಗಳ್ಲಿ ಬಂಟರ್, ಕೆಲವೆಡೆ ಬಿಲ್ಲವರ್ ಮುಖ್ಯಸ್ಥರಾಗಿದ್ದವೆ. ಇವ್ಕೆ ಸಮಾನಾಂತವಾರಿ ಸುಳ್ಯ, ಪುತ್ತೂರು, ಬೆಳ್ತಂಗಡಿ ಭಾಗಗಳ್ಲಿ ಗೌಡ ಜನಾಂಗ ಬೆಳ್ದು ಬಂದುಟು. ಆಶ್ಚರ್ಯ ತೇಕ್ರೆ ಯಜಮಾನ್ಯ ನೆಲೆಲಿ ಇರ್‍ವ ಯಾವುದೇ ವರ್ಗಗ ತುಳುನಾಡ್ನ ಮೂಲನಿವಾಸಿಗ ಅಲ್ಲ ತೇಳ್ದು. ಈ ಎಲ್ಲಾ ಪ್ರಬಲ ವರ್ಗಗ ವಲಸೆ ಬಂದ ಸಮುದಾಯಗ. ಆದರೆ ಇವು ತಮ್ಮ ಮೂಲ ಸಂಸ್ಕೃತಿಯೊಟ್ಟಿಗೆ ತುಳುನಾಡ್ನ ಆದಿಮೂಲ ಆರಾಧನಾ ಪದ್ಧತಿನ ಒಪ್ಪಿಕಂಡ್ ಬೆಳ್ದ್ ಬಂದುಟು.

ತುಳುನಾಡ್ನ ಪ್ರಕೃತಿ ಹಂಗೆ ಭೌಗೋಳಿಕ ಸನ್ನಿವೇಶಗ ಇಲ್ಲಿನ ಆಚರಣೆಗಳ್ಗೆ ಪ್ರೇರಣದಾಯಿ ಶಕ್ತಿಗ ಆವ್ಥು. ಪಡುವಣ ಕಡಲ್‌ಂದ ಹಂಗೆನೆ ಮೂಡಣ ಪಶ್ಚಿಮ ಘಟ್ಟಗಳ್‌ಂದ ಕೂಡಿರ್‍ವ ತಂಪು ತಂಪಾದ ದಟ್ಟ ಕಾಡ್‌ಗಳ್‌ಂದ ಕೂಡ್ದ ಭೂಮಿ ತುಳುನಾಡ್. ಇಲ್ಲಿನ ಕ್ರೂರ ಮೃಗಗ, ಹುಲಿ, ಹಂದಿ, ವಿಷ ಸರ್ಪಗ ಇಲ್ಲಿನ ಮೂಲ ನಿವಾಸಿಗಳ್ಗೆ ಅಲೌಕಿಕ ಶಕ್ತಿಗಳಾಗಿ ಕಂಡತ್. ಇವುಗಳೆಲ್ಲದರ್‌ಂದ ತಮ್ಮ ಬದ್ಕ್‌ಗೆ ಆಗುವಂತ ಕೇಡ್‌ನ ತಡ್ಯಕೆ ಇವುಗಳ್ನ ಪೂಜಿಸಿಕೆ ಸುರು ಮಾಡ್ದೊ. ಇದರ ಕುರುಹುಗಳ್ನ ಪೋಜುರ್ಲಿ, ಮೈಸಂದಾಯ, ಪಿಲ್ಚಂಡಿಗಳಂತ ಪ್ರಾಣಿ ಮೂಲದ ದೈವಗಳ್ಲಿ ಕಾಣಕ್. ಹಂಗಾಗಿ ಇಲ್ಲಿನ ಮೂಲನಿವಾಸಿಗಳಾದ ಮಲೆಕುಡಿಯ, ಮುಗೇರ, ಬಾಕುಡ, ಕೊರಗ, ಮನ್ಸ ಮುಂತಾದ ಜನಾಂಗಗ ದೈವಾರಾಧನೆಯ ವಾರಸ್‌ದಾರರ್. ಪರವ, ಪಂಬದ, ನಲಿಕೆ ಜನಾಂಗದವ್ ಈ ದೈವಗಳ್ನ ಆವಾಹಿಕಂಡ್ ಕುಣ್ಕಂಡ್ ಸ್ತುತಿ ಹಾಡ್‌ಗ ಪಾಡ್ದನಗಳ ಹಾಡುವೆ. ಇವರಿಂದಾಗಿನೇ ದೈವಾರಾಧನೆಗೆ ಭದ್ರ ಬುನಾದಿ ಉಟ್ಟು. ಒಂದು ಪ್ರಬಲ ವರ್ಗಗಳ ಅಡಿಗೆ ಸಣ್ಣ ಸಮುದಾಯಗ ಬಾಕನ ಇವೆರಡರ ನಡುವೆ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಕೊಡ್ದು–ತಕಂಬೊದು ನಡ್ದದೆ, ನಡ್ಯಕು. ಹಂಗಾಗಿ ವಲಸೆ ಬಂದ ವರ್ಗಗ ಇಲ್ಲಿನವರ್ನ್, ಇಲ್ಲಿನ ಸಂಸ್ಕೃತಿನ ಒಪ್ಪಿಕಂಡೊ. ಈ ಜನಾಂಗಗಳ ಮೇಲೆ ಅಧಿಪತ್ಯನ ಸಾಧ್ಸಿಕೆ ಆಚರಣೆಗಳ್ನ ಒಪ್ಪಿಕಂಡ್ ಅದರ್ಲಿ ಪರಿಣಿತರಾದವರ್ನ ಸೇರ್‌ಸಿಕಂಡ್ ನಡ್ಸುದು ಅನಿವಾರ್ಯ ಆತ್. ಕಡೆಗೆ ದೈವಾರಾಧನೆ ತಮ್ಮದೇ ತೇಳಿ, ಸ್ವೀಕರ್ಸಿ ಎಲ್ಲಾ ವರ್ಗಗ ಸೇರಿಕಂಡದ್ರಂದ ಆ ಸಂಸ್ಕೃತಿ ಸಮೃದ್ಧಿ ಆತ್.

ಪ್ರಭುತ್ವದ ನೆಲೆಲಿ ಬೆಳ್ಯಕೆ ಬಂದ ಪಂಗಡಗಳ್ಲಿ ಅರ್ವಾಚೀನವಾಗಿ ವಲಸೆ ಬಂದದ್ 'ಗೌಡ ಸಮುದಾಯ', ಅವು ವಲಸೆ ಬಂದ್ ನೆಲೆಯಾದ ಭಾಗಗಳ ಹಿಡ್ತ ಸಾಧಿಸಿ ಕ್ರಮೇಣ ತುಳುನಾಡ್ನ ಬೇರೆ ಕಡೆಗೂ ಪ್ರಸರಣ ಹೊಂದಿದೊ. ಹಂಗಾಗಿ ಪುತ್ತೂರು, ಸುಳ್ಯ ಭಾಗಗಳ್ಲಿ ಗೌಡರ್ ಪ್ರಬಲರಾಗಿ ಇತರೆಡೆ ಸಾಮಾನ್ಯ ವರ್ಗಗಳೊಟ್ಟಿಗೆ ಗುರ್ತಿಸಿಕಂಡುಟ್ಟು.

ತುಳುವ ಗೌಡರ ಮೂಲದ ಬಗ್ಗೆ ವಿದ್ವನ್ಮಂಡಳಿ ಸುಮಾರ್ ಚರ್ಚೆ ಮಾಡಿ ಇವು ಮೂಲತಃ 'ಗಂಗಟಿಕಾರ ಒಕ್ಕಲಿಗರ್' ತ ಹೇಳಿಯೊಳೊ. ಗಂಗಡಿಕಾರ ಮೂಲನ ಗಂಗರ ಪರಿವಾರಲಿ ಗುರುತಿಸಲಾವ್ಥು. ಗೌಡ ತೇಳೊ ಪದ ಗ್ರಾಮವೃದ್ಧ–ಗಾವವಡ್ಡ–ಗಾವುಂಡ–ಗೌಡ ತಾ ವ್ಯುತ್ಪತ್ತಿ ಆವ್ಥು. ಇಲ್ಲಿ ವೃದ್ಧ (ವಡ್ಡ ಪ್ರಾಕೃತ) ಗ್ರಾಮದ ಮುಖಂಡ. ಹಂಗಾಗಿ ಗೌಡ ಜಾತಿ ಸೂಚಕ ಅಲ್ಲ. ತಮಿಳಿನ ಗೌಂಡರ್, ಕರ್ನಾಟಕದ ಮಲೆನಾಡ್‌ನ ನಾಯಕರ್, ಉತ್ತರ ಕನ್ನಡದ ಹೆಗ್ಗಡೆ, ಆಂದ್ರದ ಒಕ್ಕಲಿಗ ರೆಡ್ಡಿಗ ಗೌಡರ್‌ಗೆ ಸಂವಾದಿಗ. ಒಕ್ಕಲಿಗ ತೇಳೊ ಪೂರ್ವನಾಮ ವೃತ್ತಿನ ಸೂಚಿಸಿದೆ. ಬಂಟ ಜನಾಂಗದವು ನಾಡವ–ನಾಡಗೌಡರ್ ತಾ, ಬಾರಗರ್ (ಬಂಟನ ಮಂಇ) ತಾ ಕರ್ದವೆ. ಇಲ್ಲಿ ಬಾರಗ ತೇಳ್ದು ಅವರ ಕೃಷಿ ಮೂಲನ ಸೂಚಿಸಿದೆ.

ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಗ್ರಾಮ ಪ್ರಮುಖನ ಗೌಡ ತೇಳುವೆ. ಗ್ರಾಮಕೂಟನೇ ಪ್ರಾಕೃತಲಿ ಗಾವ ಉಡ ತ ಆಗಿ ಗೌಮುಂಡ–ಗೌಡ ಆವ್ಥು (ಚಿ.ಮೂ;2008,41)

ಪ್ರಾಚೀನಲಿ ಬಂಗಾಳನ ಗೌಡದೇಶ ತಾ ಕರೀತಾ ಇದ್ದೊ. ಗೌಡದೇಶನ ಹರ್ಷವರ್ಧನನ ಅಣ್ಣ ರಾಜವರ್ಧನ ಆಳ್ತಾ ಇದ್ದ್ ಅವನ ಕೊಂದ ಶಶಾಂಕನ ಕಡೆಯವು ಗೌಡ ತೇಳೋ ಕಾರಣಕ್ಕೆ ಹರ್ಷನ ಕೋಪಕ್ಕೆ ಸಿಕ್ಕಿ ದಕ್ಷಿಣ ಕಡೆ ಬಾತ್ ತಾ ಐಹಿತ್ಯ.

'ಕರ್ನಾಟಕದ ದಕ್ಷಿಣ ಭಾಗನ ಶತಮಾನಗಳ್ಲಿ ಆಳ್ದ ಗಂಗರ ವಂಶ ಸ್ಥಾಪಕರ ಕುರ್ತಾದ ಶಾಸನೋಕ್ತ ಐಹಿತ್ಯ ಭಾರತೀಯ ಪುರಾಣ ಮೂಲದ ಹಿನ್ನಲೆಲಿ ತಮ್ಮನ್ನ ಗುರುತಿಸಿಕಣೋ ಪ್ರಯತ್ನ ಮಾಡಲಾವ್ಥು. ಹಂಗೆನೆ ಪ್ರತಿಯೊಂದು ರಾಜವಂಶದ ಸ್ಥಾಪನೆಲೂ

'ಪುರೋಹಿತ' ಮೂಲಗುರು ಶಕ್ತಿಯೊಂದು ಸಾಮಾನ್ಯವಾಗಿರುವಂಗೆ, ಈ ಐಹಿತ್ಯಲೂ 'ಸಿಂಹನಂದಿ' ತಾ ಜೈನ ಸನ್ಯಾಸಿನಿನ ಹೊಂದಿಸಲಾದೆ. ಈ ಐಹಿತ್ಯ ಗಂಗರ ಮೂಲದ ವಾಸ್ತವತೆಗೆ ಪೂರಕ ಆದುಲೆ ತಾ ವಾಸ್ತವವಾದಿ ಚರಿತ್ರೆಯ ಪ್ರಜ್ಞೆ ಇರೊ ಚರಿತ್ರೆಕಾರರ್ ಚರ್ಚಿಸಿಯೊಳೊ. ಗಂಗರ ಮೂಲ ಪುರಾಣಾಂತರ್ಗತವಾಗಿ ಜಾಹ್ನವೇಯ/ಪದ್ಮನಾಭ ಸುತ ತಾ ಶಾಸನಗಳ್ಲಿ ದಾಖಲಾವ್ವು ಗಂಗವಂಶದ ಸ್ಥಾಪಕ ತಾ ಗುರ್ತಿಸಿರೊ 'ದಡಿಯ'ಂಗೆ ಕೊಂಕುಣಿವರ್ಮ ತಾ ಬೇರೆ ಹೆಸರ್ ಉಟ್ಟು, ಇಂವ ಕ್ರಿ.ಶ 1049 ರ ಶಾಸನಲಿ 'ಕೊಂಕುಣಿ ಗಾವುಂಡ' ತಾ ದಾಖಲಾವ್ವು. (ಡಾ.ಕಣಿಯೂರು;2009,18)

ಕಣಿಯೂರು ಅವು ಇತಿಹಾಸ ತಜ್ಞ ಶೇಖ್ ಆಲಿಯವ ಅಭಿಪ್ರಾಯನ ದಾಖಲ್ಸಿ ಗಂಗರ ಮೂಲದವು ಕನ್ನಡಿಗರೇ, ಗೌಡರೂ ಗಂಗರ ಪರಿವಾರದವೂ ತಾ ದಾಖಲಿಸಿಯೊಳೊ. ಇದು ಬಾಳ ಗ್ಯಾನ ಮಾಡುವಂತ ಸಂಗತಿ.

ಗಂಗಡಿಕಾರ ಒಕ್ಕಲಿಗರ್ ಮೂಲಲಿ ತಲಕಾಡ್ನವರಾಗಿದ್ದ್ ಇವು ಆನೆಗಳ್ನ ಪಳಗಿಸುದರ್ಲಿ ಜಾಣರ್. ಇವರ ಸಮುದಾಯವೇ ಒಂದು ರಾಜ್ಯನ ಕಟ್ಟಿಯೊಳೊ ತಾ ಅನ್ಸಿದೆ. (ನಲ್ಲೂರು ಪ್ರಸಾದ್; ಸಂ.ಚಿನ್ನಪ್ಪ ಗೌಡ 2003, 172) ಗಂಗಟಿಕಾರ ಒಕ್ಕಲಿಗರ್ನ ಮುಳ್ಳು ಜನ ತಾ ಕರ್ದವೆ. ಈ ಮುಳ್ಳು ಶಿವನ ತ್ರಿಶೂಲಕ್ಕೆ ಸಂವಾದಿ ಆಗಿರದ್ರಂದ ಗೌಡರ್ ಶಿವಾರಾಧಕರ್. ಐತಿಹಾಸಿಕ ವಿವರಗಳ್ಂದ ಮುಳ್ಳು ಅಂಕುಶನ ಹೋಲ್ದೆ. ಗಂಗಡಿಕಾರ ಶಬ್ದ ಭಾಷಾಶಾಸ್ತ್ರೀಯ ಹಿನ್ನಲೆಲಿ ಕಂಟಕ ತೇಳ್ರೆ ಅಂಕುಶ ತಾ ಆದೆ. ಇವ್ಕೆ ಆನೆಯವು ತಾ ವಾಡಿಕೆಯ ಹೆಸರಿದ್ದ್ ಈ ಗಂಗಡಿಕಾರ–ಆನೆ–ಗಂಗರಿಗೆ ಹತ್ರದ ಸಂಬಂಧ ಉಟ್ಟು. ಗಂಗರಿಗೂ ಗೌಡರಿಗೂ ಇರುವ ಸಂಬಂಧ ಅಧ್ಯಯನ ಯೋಗ್ಯ ವಿಚಾರ.

'ಗಾವುಂಡ' ಪದ ವಿಜಯನಗರದ ಶಾಸನಗಳ್ಲಿ ಸಾ ಬಳಕೆಲಿ ಇದ್ದ್ ಇದೊಂದು ಸ್ಥಾನ ಸೂಚಿಸೊ ಪದ ಆಗಿತ್ತ್.

ಗೌಡ ಪದೋತ್ಪತ್ತಿ ಕುರ್ತ್ ಕಡವ ಶಂಭು ಶರ್ಮರ ಚರ್ಚೆ ದಾಖಲಾರ್ಹ. ಗೌಡರ್ ತೇಳೋ ಜಾತಿ ವಾಚಕ ಶಬ್ದ (ಗೋ+ಅಡ) ಗೋದೇಶದವು ತೇಳಿ ಸ ಅರ್ಥ ಕೊಟ್ಟದೆ. ಈ ಪದಕ್ಕೆ ಅಧಿಪತಿ ಅಧಿಕಾರಿ ತಾ ಅರ್ಥ ಲಾಕ್ಷಣಿಕವಾಗಿ ಬಂದುಟು. ಗವುಡಲಿ ಗೋ+ಅಡ ತೇಳೊ ಸಂಧಿಕಾರ್ಯ ಆಗಿ ಅವ್ ಆದೇಶ ಆವ್ವು. ಗೋದೇಶದ ರಾಜರ ಅಧಿಕಾರಿ ಜನರ್– ಪ್ರಧಾನವಾಗಿ ಕಳ್ಸಿಕೊಟ್ಟವು ಅಲ್ಲಲ್ಲಿ ಗೋ ರಾಷ್ಟ್ರಲಿ

ಗೌಡರ್ ನಾಥ ಪಂಥೀಯರ್, ಬಂಗಾಳ ನಾಥರ ಕೇಂದ್ರಗಳ್ಲಿ ಒಂದು. ಗುರು ಗೋರಖ ಇಲ್ಲಿಯವನೇ. ಗೌಡರ ಕುಣ್ತ ಸಿದ್ಧವೇಷದ ಸಾಲ್ಗ ನಾಥರ ಮಠಗಳ್ಗೆ ಅವರ ಸೇವೆನ ಸಾರ್ದೆ. "ಕದಿರೆಯ ಮಠಂದ ಸುದ್ದ ಬೇಸೋ..."

ದಕ್ಷಿಣಕನ್ನಡದ ಸುಬ್ರಮಣ್ಯ, ಸುಳ್ಯ, ವಿಟ್ಲ, ಪುತ್ತೂರು, ಬೆಳ್ತಂಗಡಿ, ಕಾಸರಗೋಡ್ನ ಗಡಿಬಾಗಗಳ್ಲಿ ಗೌಡರ್ ಬಹುಸಂಖ್ಯಾತರ್. ತುಳು ಭಷಿಕ, ಅರೆಭಾಷಿಗರ ಗೌಡರ್ ಹಾಸನದ ಐಗೂರ್ಂದ ಬಂದವು. ಇದಕ್ಕೆ ನಿಖರ ಸಾಕ್ಷ್ಯಗ ಸಿಕ್ಕದೇ ಇದ್ದರೂ ಮೌಖಿಕ ಸಾಹಿತ್ಯಗ ಆದಾರ ಆವ್ವು. ಈ ವಲಸೆ ಪ್ರಕ್ರಿಯೆ 15–16ನೇ ಶತಮಾನಲಿ ನಡ್ದಿರಕು. ಡಾ.ಬಿಳಿಮಲೆಯವು 'ಬಂಟರ ಸಂಧಿ–ಬೈದ್ಯರ ಸಂಧಿಲಿ' ಗೌಡರ ಉಲ್ಲೇಖ ಇಲ್ಲದ್ರಂದ ಇವು ತುಳುನಾಡ್ಗೆ ಕಡೆಗೆ ಬಂದವು ಇಲ್ಲೆ ಆ ಕಾಲಲಿ ಪ್ರಬಲರಾಗಿತ್ಲೆ ತೇಳ್ವೆ. ವಿವೇಕ ರೈ ಅವು ಹೇಳ್ವಂಗೆ ಬಂಟ ಸಂಧಿ 16ನೇ ಶತಮಾನದ ಕಡೆಗೆ ರಚನೆಯಾದ್ದರ್ಂದ ಪಂಜ ಎಣ್ಮೂರ್ನ ಕೇಂದ್ರೀಕರಿಸಿಕಂಡ್ ಮೆರ್ದ ಕೋಟಿ–ಚೆನ್ನಯ್ಯ ಆದಂಗೆ ಗೌಡರ್ ಬಂದೋ ತಾ ಅವರ ವಾದ. ಆದ್ರೆ ಈ ವೀರರ್ ತಮ್ಮ ಜೀವಿತಾವಧಿಲಿ ದರ್ಶಿಸಿದ 'ನಿಂತಿಕಲ್ಲ್' ಇದಕ್ಕೆ ವಿರುದ್ಧ. 'ಕಿನ್ನಿಮಾನಿ–ಪೂಮಾಣಿ'ಗ ನೆಟ್ಟ ಈ ಕಲ್ಲ್ ಅವರ ನಿರ್ದೇಶನದಂಗೆ ಅವ್ಕೆ ಆಶ್ರಯ ಕೊಟ್ಟ 'ಅರೆಂಬಿ ಗೌಡ' ರ್ಂದ ಪೂಜಿಸಲ್ಪಟ್ಟದೆ.



ಉಳ್ಳಾಕುಲುಗಳ ಪ್ರಸರಣ ಬೈದ್ಯವೀರರಿಗಿಂತ ಹಿಂದೆನೇ ಆಗುಟು. ಇದೇ ಕಲ್ಲ್ನ ವೀರರ್ ಕಿತ್ತು ನೆಟ್ಟಂಗೆ ನೆಟ್ಟದ್. ಆ ಕಾಲಲೇ ಗೌಡರ್ ಜೋರಾಗಿದ್ದೊ.

ಗೌಡರ ವಲಸೆಯ ಕುರ್ತ್ ಡಾ.ಬಿಳಿಮಲೆಯವ್ರ ಚರ್ಚೆ ಇಲ್ಲಿ ಪ್ರಸ್ತುತ. 15–16ನೇ ಶತಮಾನಲಿ ಐಗೂರ್ಂದ ಗೌಡರ್ ತುಳುನಾಡಿಗೆ ಬಾಕೆ ಕಾರಣನ ಮೌಖಿಕ ಆಧಾರಗಳ್ಲಿ ಕೊಟ್ಟೊಳೊ. ಸುಳ್ಯದ ಗೌಡರ್ ನಿರೂಪಿಸುವ 'ಕೆಂಡದ ಮಳೆ' ಐಗೂರ್ಲಿ ಆಗಿರ್ದು ತೇಳ್ವ ಭೀಕರ ಬರಗಾಲನ ಸೂಚಿಸಿದೆ. ಹೇಮಾವತಿ ನದಿ ಬತ್ತಿ ಹೋದದ್ರ್ನ ಸಂಕೇತಿಸಿದೆ. ಕೂಡುರಸ್ತೆಲಿ ಪ್ರಚಲಿತಲಿರ್ವ 'ಐಗೂರಪ್ಪನ ಲಾವಣಿ' ಕ್ರೂರಿಯಾದ ರಂಗಪ್ಪ ನಾಯಕ ಮಾಡ್ದ ಪುಂಡಾಟಿಕೆನ ಚಿತ್ರಿಸಿದೆ. ಅವನ ಕ್ರೌರ್ಯಂದ ಪಾರಾಕೆ ಗೌಡರ್ ಆ ಕಡೆಂದ ಘಟ್ಟದ ಕೆಳ್ಗೆ ಇಳ್ದ್ ಬಂದಿರಕು (ಡಾ.ಬಿಳಿಮಲೆ, ಸಂ.ಚಿನ್ನಪ್ಪ ಗೌಡ;2003, 84) ನೆಲೆ ನಿಂತ್ ಕಾಲಕ್ರಮಲಿ ಅವು ಅಧಿಕಾರವಿಲ್ಲದ ಗೌಡ ಶಬ್ದ ವಾಚ್ಯರಾಗಿರಕು ತ ಸ ಹೇಳ್ವೆ. ಗೌಡರೆಲ್ಲಾ ತುಳುನಾಡಿನವ್ (ತುಳುನಾಡು ಗೋರಾಷ್ಟ್ರ ತೇಳೋ ಅವರ ವಾದ ಗಮನ್ಸಿ) ತೇಳ್ರೆ ಗೋದೇಶಿಗರ್. ಗೋರಕ್ಷಪೀಠವಾದ ಕದ್ರಿಮಠದ ಶಿಷ್ಯರ್. (ಕಡವ;42)

ಗೌಡರ್ ನಾಥ ಪಂಥೀಯರ್, ಬಂಗಾಳ ನಾಥರ ಕೇಂದ್ರಗಳ್ಲಿ ಒಂದು. ಗುರು ಗೋರಖ ಇಲ್ಲಿಯವನೇ. ಗೌಡರ ಕುಣ್ತ ಸಿದ್ಧವೇಷದ ಸಾಲ್ಗ ನಾಥರ ಮಠಗಳ್ಗೆ ಅವರ ಸೇವೆನ ಸಾರ್ದೆ. "ಕದಿರೆಯ ಮಠಂದ ಸುದ್ದ ಬೇಸೋ..."

ದಕ್ಷಿಣಕನ್ನಡದ ಸುಬ್ರಮಣ್ಯ, ಸುಳ್ಯ, ವಿಟ್ಲ, ಪುತ್ತೂರು, ಬೆಳ್ತಂಗಡಿ, ಕಾಸರಗೋಡ್‌ನ ಗಡಿಬಾಗಗಳ್ಲಿ ಗೌಡರ್ ಬಹುಸಂಖ್ಯಾತರ್. ತುಳು ಭಷಿಕ, ಅರೆಭಾಷಿಗರ ಗೌಡರ್ ಹಾಸನದ ಐಗೂರ್‌ಂದ ಬಂದವು. ಇದಕ್ಕೆ ನಿಖರ ಸಾಕ್ಷ್ಯಗ ಸಿಕ್ಕದೇ ಇದ್ದರೂ ಮೌಖಿಕ ಸಾಹಿತ್ಯಗ ಆದಾರ ಆವ್ಪು. ಈ ವಲಸೆ ಪ್ರಕ್ರಿಯೆ 15–16ನೇ ಶತಮಾನಲಿ ನಡ್ದಿರಕು. ಡಾ.ಬಿಳಿಮಲೆಯವು 'ಬಂಟರ ಸಂಧಿ–ಬೈದ್ಯರ ಸಂಧಿಲಿ' ಗೌಡರ ಉಲ್ಲೇಖ ಇಲ್ಲದ್ರಂದ ಇವು ತುಳುನಾಡ್‌ಗೆ ಕಡೆಗೆ ಬಂದವು ಇಲ್ಲೆ ಆ ಕಾಲಲಿ ಪ್ರಬಲರಾಗಿತ್ಲೆ ತೇಳ್ವೆ. ವಿವೇಕ ರೈ ಅವು ಹೇಳ್ವಂಗೆ ಬಂಟ ಸಂಧಿ 16ನೇ ಶತಮಾನದ ಕಡೆಗೆ ರಚನೆಯಾದ್ದರ್‌ಂದ ಪಂಜ ಎಣ್ಮೂರ್ನ ಕೇಂದ್ರೀಕರಿಸಿಕಂಡ್ ಮೆರ್ದ ಕೋಟಿ–ಚೆನ್ನಯ್ಯ ಆದಂಗೆ ಗೌಡರ್ ಬಂದೋ ತಾ ಅವರ ವಾದ. ಆದ್ರೆ ಈ ವೀರರ್ ತಮ್ಮ ಜೀವಿತಾವಧಿಲಿ ದರ್ಶಿಸಿದ 'ನಿಂತಿಕಲ್ಲ್' ಇದಕ್ಕೆ ವಿರುದ್ಧ. 'ಕಿನ್ನಿಮಾನಿ–ಪೂಮಾಣಿ'ಗ ನೆಟ್ಟ ಈ ಕಲ್ಲ್ ಅವರ ನಿರ್ದೇಶನದಂಗೆ ಅವ್ಕೆ ಆಶ್ರಯ ಕೊಟ್ಟ 'ಅರೆಂಬಿ ಗೌಡ' ರ್‌ಂದ ಪೂಜಿಸಲ್ಪಟ್ಟದೆ. ಉಳ್ಳಾಕುಲುಗಳ ಪ್ರಸರಣ ಬೈದ್ಯವೀರರಿಗಿಂತ ಹಿಂದೆನೇ ಆಗುಟು. ಇದೇ ಕಲ್ಲ್‌ನ ವೀರರ್ ಕಿತ್ತು ನೆಟ್ಟಂಗೆ ನೆಟ್ಟದ್. ಆ ಕಾಲಲೇ ಗೌಡರ್ ಜೋರಾಗಿದ್ದೊ.

ಗೌಡರ ವಲಸೆಯ ಕುರ್ತ್ ಡಾ.ಬಿಳಿಮಲೆಯವ್ರ ಚರ್ಚೆ ಇಲ್ಲಿ ಪ್ರಸ್ತುತ. 15–16ನೇ ಶತಮಾನಲಿ ಐಗೂರ್‌ಂದ ಗೌಡರ್ ತುಳುನಾಡಿಗೆ ಬಾಕೆ ಕಾರಣನ ಮೌಖಿಕ ಆಧಾರಗಳ್ಲಿ ಕೊಟ್ಟೊಳೊ. ಸುಳ್ಯದ ಗೌಡರ್ ನಿರೂಪಿಸುವ 'ಕೆಂಡದ ಮಳೆ' ಐಗೂರ್‌ಲಿ ಆಗಿರ್ದು ತೇಳ್ವ ಭೀಕರ ಬರಗಾಲನ ಸೂಚಿಸಿದೆ. ಹೇಮಾವತಿ ನದಿ ಬತ್ತಿ ಹೋದರ್ನ ಸಂಕೇತಿಸಿದೆ. ಕೂಡುರಸ್ತೆಲಿ ಪ್ರಚಲಿತಲಿರ್ವ 'ಐಗೂರಪ್ಪನ ಲಾವಣಿ' ಕ್ರೂರಿಯಾದ ರಂಗಪ್ಪ ನಾಯಕ ಮಾಡ್ದ ಪುಂಡಾಟಿಕೆನ ಚಿತ್ರಿಸಿದೆ. ಅವನ ಕ್ರೌರ್ಯಂದ ಪಾರಾಕೆ ಗೌಡರ್ ಆ ಕಡೆಂದ ಘಟ್ಟದ ಕೆಳ್ಗೆ ಇಳ್ದ್ ಬಂದಿರಕು (ಡಾ.ಬಿಳಿಮಲೆ, ಸಂ.ಚಿನ್ನಪ್ಪ ಗೌಡ;2003, 84)



ಗೌಡರ್ ಅಲ್ಲಿಂದ ಬಂದ ಇತಿಹಾಸನ ತುಳುನಾಡ್ನ ದೇವಗಳ ಪಾಡ್ದನಗ ಸಾರಿ ಹೇಳ್ದೆ. ಐಗೂರ್‌ಂದ ಬಿಸಿಲೆ ಘಾಟಿ ಇಳ್ದ್ ಸುಬ್ರಹ್ಮಣ್ಯದ ಕುಮಾರಧಾರೆಯ ಎರ್ಡ್ ಕಡೆ ಗೌಡರ್ ಕಬ್ಬಿಕಂಡ್, ಸಕಲೇಶಪುರ, ಮೂಡೆಗೆರೆಯಾಗಿ ಚಾರ್ಮಾಡಿ ಘಾಟಿ ದಾಟಿ ಬೆಳ್ತಂಗಡಿಗೆ ಬಂದ್ ನೇತ್ರಾವತಿಯ ಎರ್ಡ್ ದಡಲಿ ಮುಂದುವರ್ದ ಗೌಡರ್ ಎರಡು ದಾರಿಗಳ್ಲಿ ತುಳುನಾಡ್‌ಗೆ ಇಳ್ದವೆ. ಈ ಪ್ರಸರಣ 'ಏನೇಕಲ್ಲ್‌ನ ಬಚ್ಚನಾಯಕನ' ಪಾಡ್ದನಲಿ ಕಂಡದೆ. ಬಚ್ಚನಾಯ್ಕ ಬಿಸಿಲೆ ದಾಟಿ ಬಂದ್, 'ಶಿರಾಡಿ ಭೂತ' ಚಾರ್ಮಾಡಿಲಿ ಇಳ್ದವೆ. ಇವರ ಹೆಜ್ಜೆಗಳೇ ಗೌಡರ್ ನಡ್ದ್ ಬಂದ ದಾರಿ. ಇವು ಬಾಕೆ ಮುಂದೆ ಬಂಟ–ಜೈನರ ಬಂದ್ ತಮ್ಮ ಯಜಮಾನಿಕೆನ ಇಟ್ಟಿ ಗಟ್ಟಿ ಮಾಡ್ಕಂಡಿದ್ದರೂ ಸುಳ್ಯಲಿ ಗೌಡರ ಪ್ರಾಬಲ್ಯ ಹೆಚ್ಚಿತ್ತ್ ತ ಕಂಡದೆ. ಗೌಡರ ವಲಸೆಗೆ ಮೂಲ ಸಮುದಾಯಗ ಪ್ರತಿರೋಧ ಒಡ್ಡಿತ್ಲೆ. ಹೆಚ್ಚಿನ ಜೈನ ಬಲ್ಲಾಳರ್ ಬಾಳ ಲಾಯ್ಕಲಿ ನೋಡಿಕಂಡಿರ್ವೊ ತ ಅನ್ನಿದೆ.

ಹಿರಿಯರಾದ ಜಾನಪದ ತಜ್ಞ ಡಿ.ಜಿ.ನಡ್ಕನವರೊಟ್ಟಿಗೆ ವಯಕ್ತಿಕ ಮಾತುಕತೆಲಿ 'ಗೌಡರ್ ತುಳುನಾಡ್‌ಗೆ ಬಾಕೆ ಕೆಳದಿ ನಾಯಕರ್, ಯಲಹಂಕ ನಾಡಪ್ರಭುಗ, ಹೊಯ್ಸಳರ್ ಇವೆಲ್ಲ ಒಕ್ಕಲಿಗ ಮೂಲದವು ತೇಳ್ದರ ಗಮನಿಸತಕ್ಕ ವಿಚಾರ.

ಸುಳ್ಯಲಿ ಗೌಡರ್‌ಂದ ಪೂಜಿಸುವ ಸುರುಗೆ ಸುಳ್ಯನ ಆಳ್ದ ಕೇರಳಿಗ 'ಚಾತುನಾಯರ್' ಶೃಂಗೇರಿ ಶ್ರೀಗಳ ಒಪ್ಪಗೆ ತಕಂಡ್ ಗೌಡರ್ನ ಗುಂಪು ಗುಂಪಾಗಿ ಕರ್ಕಂಡ್ ಬಂದ್ ಅರ್ವತೊಕ್ಕಲು, ಮುನ್ನೂರೊಕ್ಕಲು ತಾ ಬೇರೆ ಬೇರೆ ಮಾಡಿ ನೆಲೆ ಕೊಟ್ಟತ್ತ್. ಹಂಗಾಗಿ ನಾಯರ್ ನೇಮಲಿ ನಾಯರ್ ಅಂವ ಕರ್ಕಂಡ್ ಬಂದ ಗೌಡರ್ನ ಇಣ್ಕಿ ನೋಡ್ವ, ಲೆಕ್ಕ ಹಾಕುವ ಕ್ರಮ ಉಟ್ಟು. ಇಂವನ ಆಳ್ವಿಕೆಯ ಕಾಲಲೂ ಕೆಲ ಗೌಡ ಕುಟುಂಬಗ ಗುಂಪಾಗಿ ಬಂದಿರಕು.

ಸುಳ್ಯ ಪರಿಸರದ ಬೆಳ್ಳಾರೆ, ಕಾಂತಮಂಗಲ, ಮೂಡುಕೊಡೆಯಾಲ ಹಿಂಗೆ ಬೇರೆ ಬೇರೆ ಕಡೆ ಕೆಳದಿಯ ರಾಜರ್ ಕಟ್ಟಿದ ಕೋಟೆಗ ಉಟ್ಟು. ಸುಬ್ರಹ್ಮಣ್ಯದ ರಥ ಇವರ ಕೊಡುಗೆ ಆಗಿದ್ದ್ ಇನ್ನ್ ಬಾಳಷ್ಟ್ ದೇವಸ್ತಾನಗಳ್ಗೆ ದತ್ತಿಗಳ್ನ ಕೊಟ್ಟ ಶಾಸನೋಕ್ತ ತಮ್ಮ ಹೆಸರ್‌ನೊಟ್ಟಿಗೆ ಗವುಡ ಉಪನಾಮನೂ ಸೇರ್ಸಿಕಂಡೊಳೊ. ಇವು ಲಿಂಗಾಯಿತರ್ ಆದರೂ ಒಕ್ಕಲಿಗ ಮೂಲದವ್. ವಿಜಯನಗರ ಸಂಸ್ಥಾನ ಪತನ ಆದಂಗೆ ಇವರ ಮೇಲೆನ ಅಂಕುಶ ಹೋಗಿ ತಮ್ಮ ಸ್ಥಾನನ ಗಟ್ಟಿ ಮಾಡ್ಕಂಡೊ. ಜಾತಿಮೂಲದ ಕಾರಣಂದ ಕೆಲ ಗೌಡರ್ ತುಳುನಾಡಿಗೆ ಅಧಿಕಾರಿಗಳಾಗಿ ಬಂದೊಳೊ.

ತುಳುನಾಡ್‌ಗೆ ಬಂದರೂ ಯಜಮಾನೀಯ ಸ್ಥಾನನ ಗಳ್ಸಿದ್ದ್ ಪುತ್ತೂರು, ಸುಳ್ಯ ಪರಿಸರಲಿ ಮಾತ್ರ. ಇವು ಚಾರ್ಮಾಡಿಯ ಮೂಲಕ ಬಂದವು. ಆದರೆ ಬಂಗಾಡಿಯ ಮೂಲಕ ಬಂದವ್ ಇತರ ಸಮುದಾಯದವರೊಟ್ಟಿಗೆ ಒಂದಾಗೊಳೊ. ಸುಳ್ಯ ಪರಿಸರಲಿ ಬೈರ, ಮಾಯಿಲ, ಕೊರಗರಂತಹ ಅನೇಕ ನಿವಾಸಿಗಳಿದ್ದೊ. ಮಾಯಿಲರು ಇವರಲ್ಲಿ ಸೊಲ್ಪ ಸ್ಥಿತಿವಂತರಾಗಿದ್ದವ್. ಇದಕ್ಕೆ ಮಾಯಿಲರ ಕೋಟೆ ಮುಂತಾದ ಪ್ರಾಗೈತಿಹಾಸಿಕ ಕುರುಹುಗ ಸಾಕ್ಷಿ.

ಗೌಡರ್ ದೈವಾರಾಧನೆನ ಒಪ್ಪಿಕಂಡರೂ ತಮ್ಮ ಮೂಲದೈವಗಳ್ನ ಬುಟ್ಟತ್ಲೆ. ಕೆಲವ್ ಕಡೆ ತಮ್ಮ ಮತಮೂಲದ ದೈವಗಳ ಆರಾಧನೆನ ವಿಸರ್ಜಿಸಿಯೊಳೊ. ಗೌಡರ್ಲಿ ಪ್ರಾಚೀನ ಆದ ದೇರಾಜೆ, ಯೇನಡ್ಕ, ಕುಂಚಡ್ಕ ಹಂಗೆ ಅನೇಕ ಕುಟುಂಬಗ ಹೊಸಕೋಟೆ ಸುಬ್ಬಮ್ಮ, ಬಣಗೂರು ಕೆಂಚಮ್ಮ ತೇಳೊ ಸ್ತ್ರೀದೇವತೆಗಳ್ನೂ, ಬೈರವ, ಕೆಂಚಿರಾನೂ ಆರಾಧಿಸುವೆ.

ಗೌಡರ ಇತಿಹಾಸಕ್ಕೂ ಉಳ್ಳಾಕುಳುಗಳ್ಗೂ ಅವಿನಾಭಾವ ಸಂಬಂಧ ಉಟ್ಟು. ಕೆಳದಿ ಅರಸರ ಕಾಲಲಿ ಅರಸು ದೈವಗಳ ಆರಾಧನೆ ಆರಂಭ ಆತ ತಾ ಕಂಡದೆ. ಗೌಡರ ಮೇಲುಸ್ತುವಾರಿಲಿ ಆರಾಧನೆ ಮಾಡ್ವ ಉಳ್ಳಾಕುಳುಗ ಮೂಲನ ಗಂಗರ್ಲಿ ಚರ್ಚಿಸಲಾದೆ. ಡಾ.ಕಣಿಯೂರರ ಚರ್ಚೆ ಇಲ್ಲಿ ದಾಖಲಸಕು. ಗಂಗರ ದಡಿಗ–ಮಾದವ–ಆಲಬ್ಬೆಯರ ಕುರ್ತಾದ ಐಹಿತ್ಯಕ್ಕೂ ಉಲ್ಲಾಕುಳುಕೂ ಇರ್ವ ಸಾಮ್ಯತೆನ ಎತ್ತಿ ಹಿಡ್ದವೆ. ದಡಿಗಂಗೆ ಸಿಂಹನಂದಿ ತೇಲೊ ಜೈನ ಮುನಿ ಕರ್ಣಿಕಾರ ಪುಷ್ಪದ ಕಿರೀಟ ಇಟ್ಟದ್ರಂದ ಉಲ್ಲಾಕುಳ್ಲಿ ಹಿರಿಯಣ್ಣಂಗೆ 'ಪೂಮಾಣಿ' ತೇಲೊ ಹೆಸರ್ ಇರ್ದು ಕಂಡ್ ಬಂದದೆ. ಐಹಿತ್ಯದಂಗೆ ಬಂಗಾಳಂದ ದಡಿಗ–ಮಾದವ–ಆಲಬ್ಬೆಯರ್ ದಕ್ಷಿಣಕ್ಕೆ ಬರುವಾಗ ಅವ್ಕೆ ರಾಮ–ಲಕ್ಷ್ಮಣ–ಸೀತೆ ತಾ ಹೆಸ್ರ್ ಇತ್ತ್. ತುಳುನಾಡ್‌ಲಿ ಉಳ್ಳಾಕುಲುಗಳ್ಗೆ ರಾಮ–ಲಕ್ಷ್ಮಣ ತೇಲೋ ಜನಜನಿತ ಹೆಸ್ರ್ ಉಟ್ಟು. ಇವ್ಕೆ ಸಾತ್ವಿಕ ರೂಪದ 'ಆವಾರೊ' (ಬಾರಣೆ ಇಲ್ಲೆ. ಬರಿಯ ಹಾಲು ಮಾತ್ರ) ಕೊಟ್ಟದ್ರಂದ ಇದ್ ಜೈನ ಪ್ರಭಾವ ಇರಕು ತಾ ಅನ್ಸಿದೆ. ಪೂವಪ್ಪ ಕಣಿಯೂರರ 'ಮೌಖಿಕ ಸಂಕಥನ'ದ ಈ ಚರ್ಚೆ ನಮ್ಮನ್ನ ಆಕರ್ಷಿಸಿದೆ.

ಪಾದೂರು ಗುರುರಾಜ ಭಟ್ಟರ ಅಭಿಪ್ರಾಯದಂಗೆ 14ನೇ ಶತಮಾನಲಿ ದೈವಾರಾಧನೆ ಇಂದ್‌ನ ಸ್ವರೂಪ ಪಡ್ತ್. ಆ ಹೊತ್ತಿಗಾಗಲೇ ವಿಜಯನಗರ–ಕೆಳದಿಯರಸರ ಆಡಳಿತ ತುಳುನಾಡ್‌ಲಿ ಇದ್ದರಿಂದಾಗಿ ಅರಸು ದೈವಗಳ ಆರಾಧನೆ ಸುರು ಆತ್. ಬೇರೆ ಕಡೆ ಇರ್ವ ಉಲ್ಲಾಯ–ಉಲ್ಲಳ್ತಿರ್ನ ಬಂಗರ ಮೂಲದ ದೈವಗ ತೇಳ್ವೆ. ಈ ಅರಸು ದೈವಗಳ್ನ ಆರಾದಿಸಿಕಂಡ್ ತಮ್ಮ ಅಧಿಕಾರನ ಗಟ್ಟಿ ಮಾಡ್ವ ಯತ್ನ ನಡ್ದುಟು. ಹಂಗಾಗಿ ಬಂಗರ ಸೀಮೆಯ ವ್ಯಾಪ್ತಿ ಒಳ್ಗೆ ಬಾಳಷ್ಟ್ ಅರಸು ದೈವಗಳ ಆರಾಧನೆ ಆದೆ. ಉಲ್ಲಾಯಂಗಿಂತ ಭಿನ್ನವಾದ 'ಇರ್ವೆರ್ ಉಲ್ಲಾಕುಳು' ಗೌಡರ ಮೂಲಕ ಕೆಳದಿಯವರ ಪ್ರಾಬಲ್ಯನ ಸ್ಥಿರಗೊಳ್ಸುವ ಯತ್ನ.

ಉಲ್ಲಾಕುಳು ಘಟ್ಟ ಇಳ್ದ್ ಬಾಕನ ಸುಬ್ರಹ್ಮಣ್ಯದ ಸುಬ್ರಾಯನ (ಹಿಂದೆ ಇಂಜಾಡಿ) ಕೊಡಿ ಮರ ಏರ್ದರ್ನ ಕಂಡ್ ಅದನ್ನ ಬಾಣ ಬುಟ್ಟ್ ತುಂಡ್ ಮಾಡುವೆ. ಇವ್ಕೂ ಸುಬ್ರಾಯಂಗೂ ನಡ್ದ ಯುದ್ಧ ಒಂದು ಐತಿಹಾಸಿಕ ಧಾಳಿ ತ ಎನ್ಸಿದೆ. ಹಂಗಾಗಿ ಇಂದಿಗೂ ಕುಕ್ಕೆಸುಬ್ರಹ್ಮಣ್ಯಲಿ ಕೊಡಿಮರ ಇಲ್ಲೆ. ಅದರ ಬದ್ಲ್‌ಗೆ ಉಲ್ಲಾಕುಳು ಕೊಟ್ಟ ಕೊಪ್ಪರಿಗೆಯ ಮೂಲಕ ಜಾತ್ರೆ ಸುರು ಆದೆ. ಹಿಂಗಾಗಿ ಶಾಪತೇಳ್ವಂಗೆ ಇವ್ಕೆ ಹಾಲು ಮಾತ್ರ ಆವಾರೊ ಆಗಿ ಕೊಟ್ಟವೆ. ಡಾ. ಬಿಳಿಮಲೆಯವರ ಗೌಡೇತರ ದೇವರುಗಳ ಕೊಡಿಮರ ಕಡ್ದೊ ತೇಳ್ವೆ. ಇದ್ ಗೌಡರ ವಲಸೆ ಪ್ರಕ್ರಿಯೆಲಿ ಎದುರ್ಸಿದ ಸಂಘರ್ಷ. ಇವರ ಆರಾಧನೆ ಗೌಡರ ಮೇಲುಸ್ತುವಾರಿಕೆಲಿ ನಡ್ದದೆ.

ಗೌಡರ ಪುರುಷ ಭೂತ, ಬಚ್ಚನಾಯ್ಕ, ಶಿರಾಡಿ, ರುದ್ರಾಂಡಿ, ಕುಕ್ಕೆತ್ತಿ–ಬಳ್ಳು ಇತ್ಯಾದಿಗ ತುಳುವರ ದೈವಗಳೊಟ್ಟಿಗೆ ತಮ್ಮ ಮತ ಮೂಲದ ದೈವಗಳ್ನ ದೈವಾರಾಧನೆಯ ಸ್ವರೂಪಲಿ ಆರಾಧಿಸಿಕಂಡ್ ಬಂದುದಕ್ಕೆ ನಿದರ್ಶನಗ. ಬಚ್ಚನಾಯ್ಕನ ಪಂಜದ ಬಲ್ಲಾಳ ಕಂದಾಯ ಕೊಟ್ಟ ಯೇನೆಕಲ್ಲ್ ಮಾಗಣೆಯ ನಾಲ್ಕೂರು ಗುತ್ತು ಮನೆಯ ಸುಬ್ಬಣ್ಣ ಗೌಡನ ಶಿಕ್ಷಿಸಿಕೆ ಕಳ್ಸಿಕೊಟ್ಟದೆ. ಇಂವ ಗೌಡನ ಕೈಯಿಂದ ಸತ್ತ್ ದೈವ ಆಗಿ ಆರಾಧಿಸಲ್ಪಟ್ಟದೆ. ಮತಮೂಲದ ಸಾಮ್ಯತೆಯಿಂದ ಇಂವ ಗೌಡರ್‌ಂದ ಆರಾಧಿಸಲ್ಪಟ್ಟದೆ.

ಇಂತಹ ಬೇರೆ ಬೇರೆ ನಾಯಕ ಪರಂಪರೆಯ ದೈವಗ ಸುಳ್ಯ ಭಾಗಲಿ ಆರಾಧಿಸಲ್ಪಟ್ಟದೆ. ಬೈಸು ನಾಯಕ, ಮಡಪ್ಪಾಡಿ, ಮೊಗ್ರಾಲ್‌ನ ಕರಿಯಣ್ಣ ನಾಯಕ ಇವೆಲ್ಲರ್ ಸುಬ್ಬಣ್ಣ ಗೌಡಂದಲೇ ಸತ್ತವೆ. (ಡಾ.ಲಕ್ಷ್ಮಿ ಪ್ರಸಾದ್; 2011, 21) ಇವೆಲ್ಲ ಕೆಳದಿ ಅರಸರ ಕಾಲಲಿ ತುಳುನಾಡ್‌ಗೆ ಕಪ್ಪ ತಕಣಿಕೆ ಬಂದ ಅರಸು ಪ್ರತಿನಿಧಿಗ.



ಗೌಡರ್ ಮೂಲತಃ ನಾಥಪಂಥೀಯರ್. ಇವು ಆರಾಧಿಸುವ ಪುರುಷರಾಯ ಒಬ್ಬ ನಾಥ ಸನ್ಯಾಸಿ. ಇದೊಂದು ಉದ್ದದ ಇತಿಹಾಸ. ತುಳುನಾಡ್ಲಿ ಕದ್ರಿ, ವಿಟ್ಲ, ಗುರುಪುರ, ಕಾಣಿಯೂರು, ಮಂಜೇಶ್ವರಾದಿ ಹಲವ್ ಕಡೆ ತಾಂತ್ರಿಕ ಪಂಥಗಳ ಕುರುಹುಗ ಹಂಗೆ ಜೋಗಿ ಮಠಗ ಉಟ್ಟು. ಶೈವ ಮೂಲದ ಪಾಶುಪತ, ಶಾಕ್ತ, ಕಾಳಮುಖ, ಲಕುಲೀಶ, ಕಾಪಾಲಿಕ, ಕಾಳಾದಿ ನಾಥ ತಾಂತ್ರಿಕ ಪಂಥಗಳ ಕುರುಹುಗ ಸುಳ್ಯಲಿ ಕಂಡ್‌ಬಂದದೆ. ಪುರುಷರಾಯ ಒಬ್ಬ ಮಠಂದ ಮಠಕ್ಕೆ ಸುತ್ತುವ ಜೋಗಿ. ಗೌಡರ ಸಿದ್ದವೇಷ ಹಂಗೆ ಜೋಗಿ ಕುಣ್ತ ಶೈವಮೂಲದೊಟ್ಟಿಗಿನ ಅವರ ಸಂಬಂಧನ ತೋರ್ಸಿದೆ.

ಗೌಡರ್ ಕುಟುಂಬಗಳ್ಲಿ ಧರ್ಮದೈವವಾಗಿ ಮಾತೃಮೂಲೀಯ 'ರುದ್ರಾಂಡಿ'ನ ಆರಾಧಿಸುವೆ. ಕಲವ್ ಕಡೆ ಅಡ್ಯಂತಾಯನ ಉಲ್ಲಾಕುಳು ಸಂಕೀರ್ಣಲಿ ಆರಾಧಿಸುವೆ. ಮನೆಗಳ್ಲಿ ಕಲ್ಲುರ್ಟಿನ ಪ್ರಧಾನವಾಗಿ ಪೂಜೆ ಮಾಡುವೆ.

ಜೈನ–ಬಂಟ–ಬಿಲ್ಲವ್ಕೆ ಸುತ್ತು ಪಡ್ಸಿರೆ ಮನೆ ಇರುವಂಗೆ ಇವ್ಕೂ 'ಐನ್ ಮನೆ' ಉಟ್ಟು. ಇದೊಂದು ರಾಚನಿಕ ಹಂಗೆ ಸಾಂಸ್ಕೃತಿಕವಾಗಿ ಸಂಕೀರ್ಣವಾದದ್ದ್. ಐನ್ ಮನೆಲಿ ಕುಲದೈವ, ಮನೆದೈವ, ಗುರುಕಾರಣರ್, ಧರ್ಮದೈವಗಳೊಟ್ಟಿಗೆ ಕರ್ತನ ನಿರ್ದೇಶನಲಿ ನಡೆವ ಮನೆ. ಈ ಐದು ವ್ಯವಸ್ಥೆಗಳ ಮನೆಲಿ ಕುಲದೈವಗಳ ಕೋಣೆ ಇದ್ದ್ ಮುಡ್ಪು, ಹರಿಸೇವೆಗ ಇಲ್ಲೇ ನಡ್ದದೆ. ಇದೇ ಮನೆಲಿ ಉದ್ರಾಂಡಿ, ಉಲ್ಲಾಕುಳು, ವಿಷ್ಣುಮೂರ್ತಿಯ ಭಂಡಾರ ಇದ್ದದೆ. ಸಾಮಾನ್ಯವಾಗಿ ಅಡುಗೆ ಕೋಣೆಯ ಪಕ್ಕ ಕತ್ತಲ್ಲಿ ಕಲ್ಲುರ್ಟಿಯ ಬೆತ್ತ ಪರಿಕರಗ ಇದ್ದದೆ. ಹೊರಗೆ ಅಗೆಲು ಹಾಕುವೆ.

ಗೌಡರ ಎಲ್ಲಾ ಆರಾಧನೆಗಳ್ಲೂ 'ಕನ್ನಿಕಂಬ'ನ ಕೇಂದ್ರೀಕರಿಸಿಕಂಡದ್ ವಿಶೇಷ. ಸುಳ್ಯನ ಆಳ್ದ ಅಷ್ಟ ಬಲ್ಲಾಳ್ತಿಯರೂ ತಮ್ಮ ವಂಶ ನಾಶ ಆದಂಗೆ ಆಸ್ತಿಯೊಟ್ಟಿಗೆ ಆರಾಧನ ವ್ಯವಸ್ಥೆನ ಗೌಡರ್ಗೆ ಕೊಟ್ಟದ್ ಗಮನಾರ್ಹ. ದೈವಗ "ಬಲ್ಲಾಳನ ಕಾಲದ ಪೂರ್ವಕಟ್ಟಳೆ, ಅನ್ಯಾಯ ಮಾಡ್ದ ಬಲ್ಲಾಳನ ಸಂತತಿನ ನಾಶಮಾಡಿ ನಿಮ್ಮ ಬೆನ್ನ್‌ಹಿಡ್ದೊ" ತಾ ಮಹಾಸ್ಥಿತ್ಯಂತರದ ಮಾತ್‌ನ ಗೌಡರೊಟ್ಟಿಗೆ ಆಡುವೆ. ಸುಳ್ಯದ ಮರ್ಕಂಜ, ಕಂದ್ರಪಾಡಿ, ಪಂಜ, ನಡುಗಲ್ಲು ಹಿಂಗೆ ಬೇರೆ ಬೇರೆ ಕಡೆ ಬಸ್ತಿಯ ಅವಶೇಷಗ ಉಟ್ಟು. ಇವು ನಾಶ ಆದಂಗೆ ಗೌಡರ್ ಸಾಮಾಜಿಕ, ರಾಜಕೀಯ ಹಂಗೆ ಆರಾಧನಾ ಘಟಕಲಿ ತಮ್ಮ ಸ್ಥಾನನ ಭದ್ರ ಮಾಡಿಕಂಡೊ. ಇಂದ್ ಸುಳ್ಯ ಪುತ್ತೂರ್‍ನ ಹಲವು ದೇವಾಲಯಗಳ ಆಡಳಿತದಾರರಾಗಿ, ಪೂಜರ್ಮೆಯವರಾಗಿ ಗುರ್ತಿಸಿಕಂಡೊಳೊ.

ಗೌಡರ್ ದೈವಾರಾಧನೆನ ಒಪ್ಪಿಕಣಿಕೆ ಬಾಳಷ್ಟ್ ಸ್ಥಿತ್ಯಂತರಗ ಆವ್ಚು. 'ಕೊಡ್ದು-ತಕಂಬದು' ನಡ್ದುಟು. ತಮ್ಮ ಮತ ಮೂಲದ ದೈವಗಳ ಮೂಲಕ ದೇವ ಪ್ರಪಂಚನ ಸಮೃದ್ಧಗೊಳ್ಸಿಯೊಳೊ. ತುಳುವರೊಟ್ಟಿಗೆ ಒಂದಾಗಿ ಸಂಸ್ಕೃತಿನ ಉನ್ನತಿಕರಿಸಿಕಂಡ್ ಸಂಸ್ಕೃತಿಲಿ ಒಂದಾಗೊಳೊ.

* * * * * * * *

# ಹಾಸ್ಯ

## ಅವ್ವ ಮತ್ತೆ ಪಿಳ್ಳಿ

-ಮೇರ್ಕಜೆ ಲೋಹಿತ್ ಸೋಮಯ್ಯ

ಪಿಳ್ಳಿ: ಅವ್ವ ನಂಗೆ ನಿದ್ದೆ ಬರ್‍ತಾ ಇಲ್ಲೆ ಟಿ.ವಿ ನೋಡ್ಲಾ..?
ಅವ್ವ: ಬೇಡ ನೇ ಬಾ ಮಾತಾಡ್ನೊ...
ಪಿಳ್ಳಿ: ನಾವು ಯಾಗೊಳೂ 6 ಜನ ಮಾತ್ರ ಯಾಕೆ ಇರ್‍ದು? ಅಮ್ಮ, ಅಪ್ಪ, ನೀವು, ಅಕ್ಕ, ನಾನ್ ಮತ್ತೆ ಕೊತ್ತಿ
ಅವ್ವ: ಇಲ್ಲೆನೇ ನಮ್ಮನೆಗೆ ಒಂದು ನಾಯಿ ತಕಬಾನೊ ಆಗ 7 ಜನ ಆದವೆ.
ಪಿಳ್ಳಿ: ನಾಯಿ ಕೊತ್ತಿನ ತಿಂದು ಬುಟ್ಟರೆ 6 ಜನ ಆದವೆ.
ಅವ್ವ: ನಿಂಗೆ ಒಂದು ಮದ್ವೆ ಮಾಡುನೊ, 7 ಜನ ಆದವೆ.
ಪಿಳ್ಳಿ: ಆಗ ಅಕ್ಕಂಗೆ ಮದುವೆ ಮದ್ವೆ ಆಗಿದ್ದದೆ ಅಲ.. ಮತ್ತೆ 6 ಜನನೇ..
ಅವ್ವ: ನಿಂಗೆ ಒಂದು ಕೂಸು ಆದೆ ಅಲ. ಆಗ 7 ಆದವೆ.
ಪಿಳ್ಳಿ: ಅಷ್ಟೊತ್ತಿಗೆ ನೀನ್ ಸತ್ತೊಗಿದ್ಯಲ್ಲ. ಪುನಃ ನಾವು 6 ಜನನೇ ಉಳ್ಯದು.
ಅವ್ವ: ದಾಟತ್ತ.. ನೀನು ಹೋಗಿ ಟಿ.ವಿ ನೋಡು..

* * * * * * * *

## ಅರೆಬಾಸೆ ಮುಡ್ಪು

-ಕೊಕ್ಕಲೇ ಮಾಲಿನಿ ಮುತ್ತಪ್ಪ

ಮನ್ಸ್‌ನ ಗುಡಿಲಿ ಪೊರ್ಲುಲಿ ಬೆಳ್ಗ್‌ತ್ತಿರ್‍ವ
ಐನ್‌ಮನೆನ ದೀಪ ನೀ
ಹೃದಯದ ಆಳಲಿ ಸಿಕ್ಕಿದ ಪೊರ್ಲುನ
ಅರೆಭಾಸೆ ಮುಡ್ಪು ನೀ
ಸೂರ್ಯನ ಸ್ನೇಹಲಿ ಪೊರ್ಲುಲಿ
ಅರಳ್ದ್ ಹಿಂಗಾರ ನೀ
ನೆನ್ಪಿರ್‍ಲಿ... ಐನ್‌ಮನೆನ ದೀಪ ಆರದಿರ್‍ಲಿ
ಅರೆಭಾಸೆ ಉಳಿಯಲಿ ಹಿಂಗಾರ ಬಾಡದಿರ್‍ಲಿ
ಅರೆಭಾಸೆ ಮುಡ್ಪು ಪತ್ರಿಕೆಲಿ ಇನ್ನ್ ಹೊಸ
ಹೊಸ ವಿಸ್ಯಗ ಹಿಂಗೆ ಮೂಡಿಬರ್‍ಲಿ

# ನಮ್ಮ ಬೇರ್ ಹುಡುಕಾಟಲಿ

–ಪುತ್ತೂರು ಅನಂತರಾಜ ಗೌಡ

ಈ ಗೌಡರ ಪ್ರತಿಷ್ಠಿತ ಕುಟುಂಬ ಪುತ್ತೂರ್‌ನ ಬಲನಾಡು (ಬಲ್ನಾಡು)ಲಿ ನೆಲೆಕಂಡ್ ಐಗೂರು ಸೀಮೆಂದ ಬೆಳ್ತಂಗಡಿ, ಪುತ್ತೂರು, ವಿಟ್ಲ ಹಿಂಗೆ ಬೇರೆ ಬೇರೆ ಸೀಮೆಗಳ್ನ ಗೌಡ ಜನಾಂಗ ವಲಸೆ ಬಂದ್ ನೆಲೆಕಂಡ್‌ಕಣಿಕೆ ಪ್ರೇರಣೆ ಆತ್. ಮತ್ತೆ ಬಲ್ನಾಡ್ ಮನೆತನದ 'ಬಲಸನ್ನ' ಗೋತ್ರದ ಗೌಡರ್ ಈ ಪ್ರದೇಶದ ಕಟ್ಟೆಮನೆ ಆತ್.



ಅಕ್ಕಮ್ಮ ಮತ್ತೆ ದುಗ್ಗಮ್ಮ ತೇಳೋ ಬಲ್ಲಾಳ್ತಿಯರ್ ಒಳಲಂಬೆಲಿ ಆಳ್ವಿಕೆ ನಡೆಸ್ತಾ ಇದ್ದೊ (ಅಂದಾಜು ಕ್ರಿ.ಶ 1540). ಇವರ ಆಳ್ವಿಕೆಲಿ ಗುತ್ತಿಗಾರು, ನಾಲ್ಕೂರು, ಕಂದ್ರಪಾಡಿ, ದೇವರಚಳ್ಳ ಮತ್ತೆ ಮಡಪ್ಪಾಡಿ ಸೇರ್‍ದಂಗೆ 5 ಗ್ರಾಮಗ ಸೇರಿದ್ದೊ. ಈ ಹೊತ್ತ್‌ಲಿ ಶಂಕರಪುರುಷ ಮತ್ತೆ ದೇವಾಂಗ ಪುರಪತಿಯ ಮಕ್ಕಳ್ಲಿ ನಾಲ್ಕುಗಂಡು ಒಂದು ಹೆಸರ್‍ಲಿ ಶೃಂಗೇರಿ ಮಠಾಧಿಗಳ್‌ಂದ ದೀಕ್ಷೆನ ಪಡ್ದ್ ಕಾಶಿಲಿ ನವನಾಥ, ಜೋಗಿಗಳ್‌ಂದ ಮಂತ್ರತಂತ್ರಗಳ್‌ಂದ ದೀಕ್ಷೆನ ಪಡ್ದ್ ಕಾಶಿಲಿ ಜೋಗಿನಿಯರಾದವೆ. ಇಕ್ಕೇರಿ ಅರಸರ್ ಮೂಲತಃ ಶೈವರಾದ ಇವರ್‍ನ ದಕ್ಷಿಣ ಕನ್ನಡಲಿ ಅದಾಗಲೇ ನೆಲೆ ಕಂಡಿದ್ದ ಗೌಡ ಸಮುದಾಯದ ಆಸರೆ ಮುಖಾಂತರ ತಮ್ಮ ಆಡಳಿತ ಹಿಡಿತನ ಬಲಪಡ್ಸಿಕೆ ಮತ್ತೆ ಶೈವ ಸಂಪ್ರದಾಯನ ಪುನರ್ ಸ್ಥಾಪಿಸಿಕೆ ತುಳುನಾಡ್‌ಗೆ ಕಳ್ಸಿಕೊಟ್ಟವೆ. ಐದು ಜನ ಅಣ್ಣ ಮತ್ತೆ ತಂಗಿ ತುಳುನಾಡ್ನ ಶೈವ ಸ್ಥಾನಗಳಾದ ಕದ್ರಿ, ವಿಟ್ಲ, ಪುತ್ತೂರು, ಸುಬ್ರಮಣ್ಯ, ತೊಡಿಕಾನ ಮಲ್ಲಿಕಾರ್ಜುನ ಹಂಗೆ ಭಾಗಮಂಡಲ–ತಲಕಾವೇರಿ ಇತಾದಿ ಸ್ಥಳಗಳ್ನ ಸಂದರ್ಶಿಸಿ ಶೈವ ಸಂಪ್ರದಾಯನ ಪುನರ್ಜೀವನಗೊಳ್ಸಿದೊ. ಆ ಹೊತ್ತ್‌ನ ಶೈವ, ಶಾಕ್ತ ಮುಂತಾದ ಧರ್ಮಗಳ್ಲಿ ತಾಂತ್ರಿಕ ಪರಂಪರೆಗ ಅಸ್ತಿತ್ವಲಿ ಇದ್ದೊ. ಅದರ್‍ಲೂ ಶೈವ ಪರಂಪರೆ ಪಾಶುಪತನಾಥಸಿದ್ಧ, ಲಕುಲೀಶ, ಕಾಪಾಲಿಕ ಮುಂತಾದ ಪ್ರತ್ಯೇಕ ವಿಭಾಗಗಳ್ನ ಹೊಂದಿತ್ತ್. ಜೈನ ಮತ್ತೆ ವೈಧಿಕ ಧರ್ಮಗಳ ಮೇಲೆ ಪ್ರಹಾರವನ್ನೆಸೆಯಕೆ ಕಾರಣೀಭೂತ ಆದಂವ ಜೋಗಿ ಪುರುಷ. ಮೂಲತಃ ಶೈವರಾದ ಗೌಡ ಸಮುದಾಯದ ಜನ ಕಂದ್ರಪಾಡಿಯ ಆ ಹೊತ್ತ್‌ಲಿ ಆಳುವ ವರ್ಗ ಆದ ಜೈನ ಬಲ್ಲಾಳರ್‍ನ ಮತ್ತೆ ನಾಗಾರಾಧನೆ ಬ್ರಾಹ್ಮಣರ್‍ನ ರಕ್ತಸಿಕ್ತವಾದ ಹೋರಾಟವೊಂದರ್‍ಲಿ ಏಕಕಾಲಲಿ ಹೊಡೆದೋಡ್ಸಿದ ಪ್ರಸಂಗ ಕಂದ್ರಪಾಡಿಲಿ ನಡ್ದಿತ್ತ್ (ಕೆ.ಆರ್ ವಿಧ್ಯಾಧರ–2001).

ಇನ್ನೊಬ್ಬ ಐಗೂರು ಸೀಮೆಯ ದಂಡನಾಯಕ ಕುಮಾರ ಸ್ವಾಮಿ ತನ್ ತಮ್ಮನೊಟ್ಟಿಗೆ (ಕ್ರಿ.ಶ. ಸುಮಾರು 1560)ಲ್ಲಿ ಸುಳ್ಯ ಪರಿಸರಕೆ ಬಂಡುಟು. ಇವು ತಮ್ಮ ಸಂಬಂಧಿಗಳಾದ ಕೂಜುಗೋಡು ಮನೆಗೆ ಬಂದ್ ಕಡೆಗೆ ಸುಳ್ಯದ ಬಳ್ಳಡ್ಕಕೆ ಬಂದವೆ. ತಮ್ಮ ಕುಂಬ್ಳೆ ಸೀಮೆ ಸೇರಿ ಮಾಯ್ಪಾಡಿಯ ರಾಜಕುಮಾರಿನ ಮದ್ವೆ ಆದೆ. ಅಣ್ಣ ಕುಮಾರಸ್ವಾಮಿ ತಾನು ಲಿಂಗಾಯತ ಮತಸ್ಥ ಆದರ್‌ಂದ ತನ್ನೊಟ್ಟಿಗೆ ಇದ್ದ ಶಿವಲಿಂಗನ ಬಳ್ಳಡ್ಕಲಿ ಸ್ಥಾಪಿದಂತ ಮಠ ಇಂದಿಗೂ ಅವನ ವಂಶ ಮೂಲದ ಬಳ್ಳಡ್ಕ ಕುಟುಂಬದವರ್‌ಂದ ಲಿಂಗಾಯತ ವಿಧೀಯ ಪ್ರಕಾರ ಆರಾಧಿಸಲ್ಪಟ್ಟದೆ. ಕಾಲಾನುಗುಣಲಿ ಕುಮಾರಸ್ವಾಮಿ ಸುಳುಕೋಡಿ ಚೆನ್ನು ಬಳ್ಳಾಳ್ತಿಯ ವಾರಿಸುದಾರ ಆದೆ. ಕುಮಾರಸ್ವಾಮಿ ವಂಶಸ್ಥರ್ ವಿಭಜನೆ ಆಗಿ "ಕಬರ್" ಬಳಿ ತೇಳೋ 9 ಗೋತ್ರ (ಬಳಿ)ಗೆ ಸೇರುವೆ.



ಕೂಜುಗೋಡು, ಕಟ್ಟೆಮನೆ, ಮೂಲದ ನಾಯರ್ ಗೋತ್ರ, ಬಲ್ನಾಡು ಕಟ್ಟೆಮನೆ ಬಲಸನ್ನ ಗೋತ್ರ ಹಂಗೆನೆ ಬಳ್ಳಡ್ಕದ ಕಬರ್ ಗೋತ್ರ ಮೂಲಪುರುಷರ್ ಒಂದೇ ಮೂಲದವು, ಲಿಂಗಾಯತ ಮತಸ್ಥರಾಗಿದ್ದ್ ಈ ಗೋತ್ರಗಳ ಮಧ್ಯೆ ಹೆಣ್ಣ್ ಕೊಡು–ತರುವ ಕ್ರಮ ಇಲ್ಲೆ. ಈ ಗೋತ್ರದವು ಮದ್ಯ ಮತ್ತೆ ಹಂದಿ ಮಾಂಸ ತಿಂಬತಿಲ್ಲೆ.

**ಕೊಡಗ್‌ಲಿ ಗೌಡರ್:**

ಈಗಿನ ಕೊಡಗು ಅನಾಧಿ ಕಾಲಲಿ ದಟ್ಟಾರಣ್ಯಂದ ತುಂಬಿತ್ತ್. ಮೂಲ ನಿವಾಸಿಗಳಾದ ಅಮ್ಮ ಕೊಡವರ್ ಇತ್ಯಾದಿ ಬುಡಕಟ್ಟ್ ಜನಾಂಗದವ್ ವಾಸ ಇದ್ದೊ. ಕೊಡಗು, ಹಾಸನ ಮತ್ತೆ ಚಿಕ್ಕಮಗಳೂರು ಮಲ್ನಾಡ್ ಪ್ರದೇಶಗ ಗಂಗರಾಜರ ಅಧೀನಕ್ಕೆ ಒಳಪಟ್ಟಿತ್ತ್. ಹಾಲೇರಿ, ಭಾಗಮಂಡಲದಂತ ಚಿಕ್ಕಪುಟ್ಟ ಊರಳಾಗಿದ್ದೊ. ಭಾಗಮಂಡಲ ತಲಕಾವೇರಿಗೆ ಗಂಗರಾಜರ್ ತಮ್ಮ ಸೈನ್ಯದೊಟ್ಟಿಗೆ ತೀರ್ಥ ಸ್ನಾನಕ್ಕಾಗಿ ಬಂದ್ ಹೋಗ್ತಿದ್ದೊ. ಕೊಡಗ್‌ನ ಹಳ್ಳಿಗಳ್ಲಿ ಕಪ್ಪ ಕಾಣಿಕೆಗಳ ವಸೂಲಿಗಾಗಿ ಮತ್ತೆ ಭಾಗಮಂಡಲದ ಭಗಂಡೇಶ್ವರ ದೇವಳದ ಕ್ಷೇತ್ರಪಾಲಕರಾಗಿ ತಮ್ಮವ್ರನ್ನ ನೇಮಿಸಿದ್ದೊ. ಸ್ಥಳೀಯ ಅಮ್ಮಕೊಡವರ್ ದೇವಳದ ಅರ್ಚಕರಾಗಿದ್ದೊ. ಗೌಡರ ಕೋಡಿ ಮನೆ ಮತ್ತೆ ನಿಡ್ಯಮಲೆ ಕುಟುಂಬದವು ಅನಾದಿಕಾಲಂದನೂ ತಲಕಾವೇರಿ ಹಂಗೆ ಭಗಂಡೇಶ್ವರ ದೇವಸ್ಥಾನಗಳ ಕ್ಷೇತ್ರ

ಪಾಲಕರಾಗಿಯೂ, ತಕ್ಕರಾಗಿಯೂ ದೈವ ಕಾರ್ಯಲಿ ತೊಡಗಿದ್ದೊ ತಾ ಮೌಖಿಕ ಐಹಿತ್ಯಂದ ತಿಳ್ದ್ ಬಂದದೆ. ಚೋಳರ ಕೈಲಿ ಗಂಗರಾಜರ ಪಥನದ ನಂತರ (ಕ್ರಿ.ಶ 1004) ಚೋಳರ್ ತಮ್ಮ ಸಂಬಂಧಿಗಳಾದ ರಾಜರಾಜ ಕೊಂಗಾಳ್ವ ಚೋಳ ಮತ್ತೆ ಚೆಂಗಾಳ್ವ ಚೋಳ ಭಾಗಮಂಡಲಂದ ಆಳ್ತಾ ಇದ್ದೊ.

ಕ್ರಿ.ಶ.1550ರ್‌ಂದ 1590ರ ವರೆಗೆ ಪಾಳೇಗಾರ ಕರ್ಣಂಬಾಹು ತೇಳಂವ ಆಳ್ತಾ ಇತ್ತ್, ಕ್ರಿ.ಶ.1590ರ್ಲಿ ಹಾಲೇರಿ ರಾಜವಂಶ ಸ್ಥಾಪಕ ವೀರರಾಜು ಮತ್ತೆ ಆತನ ಮಾವ ಬೊಮ್ಮಗೌಡ ಕರ್ಣಂಬಾಹುನ ಓಡ್ಸಿ ಪೂರ್ತಿ ಮೇಲ್ನ ಕೊಡಗ್‌ನ ತನ್ನ ವಶಕ್ಕೆ ತಕಂಡೊ. ನಿಡ್ಯಮಲೆ ಕುಟುಂಬದವರ್ನ ಭಾಗಮಂಡಲ ಭಗಂಡೇಶ್ವರ ದೇವಸ್ಥಾನಕ್ಕೂ ಕೋಡಿ ಮನೆಯವರ್ನ ತಲಕಾವೇರಿಗೂ ಕ್ಷೇತ್ರಪಾಲಕರಾಗಿ ಹಂಗೆ ಮುಖ್ಯ ತಕ್ಕರಾಗಿ (ಸಂಕೇತ ಅಧಿಕಾರಿ) ನೇಮಿಸಿದೊ. ನಿಡ್ಯಮಲೆ ಕುಟುಂಬದ ಇನ್ನೊಂದ್ ಹೆಸರ್ "ದರಗನ" ತೇಳ್ರೆ ಸಂಸ್ಕೃತಲಿ "ದರೋಗನ" (ಕ್ಷೇತ್ರಪಾಲಕ) ತೇಳ್ದರ ಅಪಭ್ರಂಶ ಆವ್ವು. ಇಂದಿಗೂ ಭಗಂಡೇಶ್ವರ ದೇವಸ್ಥಾನದ ಭೂಮಿಗಳ ಆರ್.ಟಿ.ಸಿ ಲಿ ನಿಡ್ಯಮಲೆ ಕುಟುಂಬದವು ಜಟಿ ಖಾತೆದಾರರಾಗೊಳೊ. ವೊಕ್ಕಲಿಗ ಮೂಲದ ಗೌಡರ್ ಅನಾದಿ ಗಂಗರ ಕಾಲಂದನೂ ಕೊಡಗ್‌ಲಿ ವಾಸವಾಗಿಯೊಳೊ.



ಹಾಲೇರಿ ರಾಜವಂಶದ ಮೂಲ ಪುರುಷ ವೀರರಾಜು ತೇಳಂವ ಇಕ್ಕೇರಿ ವಂಶದ ರಾಜಕುಮಾರ ಆಗಿದ್ದದೆ. ಇಂವ ಇಕ್ಕೇರಿ ಸದಾಶಿವ ನಾಯಕನ (ಕ್ರಿ.ಶ 1530–1566) ಸೋದರಳಿಯ. ಇವು ಗಂಗ ಮೂಲದವರಾದರೂ ವೀರರಾಜು ತನ್ನ ಸಂಬಂಧಿ ಕೊಡಗ್‌ನ ಹಾಲೇರಿನ ಊರಗೌಡನಾದ ಬೊಮ್ಮಗೌಡನಲ್ಲಿಗೆ ಬಂದ್ ಬೊಮ್ಮಗೌಡನ ಮಗಳು ನೀಲಮ್ಮನ ಮದುವೆ ಆಗಿ ಹಾಲೇರಿ ವಂಶದ ಸ್ಥಾಪಕ ಆದೆ.

ಕ್ರಿ.ಶ.1700ರ್ಲಿ ಸೋಮಶೇಖರ ನಾಯಕ ಅಮರ ಸುಳ್ಯ ಮತ್ತೆ ಪುತ್ತೂರು ಮಾಗಣೆಗಳ್ನ ಹಾಲೇರಿ ಮನೆಸ್ಥಾನಕ್ಕೆ ದಾನವಾಗಿ ಕೊಟ್ಟದೆ. ಈ ಪ್ರಯುಕ್ತ ಈ ಪ್ರದೇಶಗ ಕೊಡಗ್‌ನ ಅವಿಭಾಜ್ಯ ಅಂಗವಾಗಿ ಕ್ರಿ.ಶ 1700ರ್‌ಂದ 1834ರ ವರೆಗೆ ಉಳ್ದದೆ.

ಕ್ರಿ.ಶ 1793ರ್ಲಿ ಹಾಲೇರಿ ರಾಜ ದೊಡ್ಡವೀರಪ್ಪ ಒಡೆಯ ಸುಬ್ರಮಣ್ಯದ ಕೂಜುಗೋಡು ಮನೆಯ ಕುಂಭಪ್ಪಗೌಡ ಮತ್ತೆ ಅವನ ಕುಟುಂಬದವರ್ನ ಮಡಿಕೇರಿಯ ಓಂಕಾರೇಶ್ವರ ದೇವಸ್ಥಾನ ಕಟ್ಟ್‌ಕನ ಉಸ್ತುವಾರಿಯಾಗಿ ಕರ್ಸಿಕಂಡದೆ. ಹಾಲೇರಿ ಪಕ್ಕದ ಮಕ್ಕಂದೂರ್ಲಿ ಈ ಕುಟುಂಬಕ್ಕೆ ಉಂಬಳಿ ಕೊಟ್ಟಿದ್ದ್ ಮುಂದಕ್ಕೆ ಈ ಕುಟುಂಬವು "ಕುಂಭಗೌಡನ" ಮನೆ ತಾ ಕರೆಯಲ್ಪಟ್ಟದೆ.

**ಮುಂದುವರ್ದದೆ......**

* * * * *

## ಏಪ್ರಿಲ್ 21ರ್‌ಂದ ಪೈಕೇರ ಕ್ರಿಕೆಟ್ ಕಪ್

ಈ ವರ್ಸದ ಗೌಡ ಕ್ರಿಕೆಟ್ ಕಪ್ ಪಂದ್ಯಾಟಗ ಏಪ್ರಿಲ್. 21 ರ್‌ಂದ ಮೇ. 7 ರ ಮುಟ್ಟ ಮಡಿಕೇರಿನ ಜನರಲ್ ತಿಮ್ಮಯ್ಯ ಆಟದ ಬಾಣೆಲಿ ನಡ್ದದೆ ತಾ ಕೊಡಗು ಗೌಡ ಯುವ ವೇದಿಕೆನ ಅಧ್ಯಕ್ಷ ಪೈಕೇರ ಮನೋಹರ್ ಮಾದಪ್ಪನವು ತಿಳ್ಸಿಯೊಳೊ.




ಮಡಿಕೇರಿಲಿ ಕರ್ದ ಸುದ್ದಿಗೋಷ್ಠಿಲಿ ಮಾತಾಡ್ದ ಅವು, "ಬಿಳಿಗೇರಿಯ ಪೈಕೇರ ಕುಟುಂಬದವರ ಆಶ್ರಯಲಿ ಈ ಸಲ ಪಂದ್ಯಾಟ ನಡ್ದದೆ, ಸುಮಾರ್ 200 ತಂಡಗ ಬಂದವೆ ತಾ ನಿರೀಕ್ಷೆ ಉಟ್ಟು. ಈ ಹಿಂದೆ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ನಡ್ಸಿಕಂಡ್ ಬರ್‍ತಿದ್ದ ಕ್ರಿಕೆಟ್ ಹಬ್ಬನ ಕಳ್ದ ನಾಲ್ಕು ವರ್ಷಗಳ್‌ಂದ ಕೊಡಗು ಗೌಡ ಯುವ ವೇದಿಕೆ ಕೊಡಗು ಗೌಡ ಯುವ ವೇದಿಕೆ ನಡ್ಸಿಕಂಡ್ ಬರ್‍ತಾ ಉಟ್ಟು. ಕಳ್ದ ಸಲ 180 ತಂಡಗ ಭಾಗವಹಿಸಿದ್ದೊ" ತಾ ವಿವರ ಕೊಟ್ಟೊ. ಕ್ರಿಕೆಟ್ ಹಬ್ಬ ಯಶಸ್ವಿಗಾಗಿ ಬೇರೆ ಬೇರೆ ಉಪ ಸಮಿತಿಗಳ್ನ ಈಗಾಗಲೇ ರಚಿಸಲಾವ್ವು, ಅದರಂಗೆ ಸಿದ್ದತೆಗಳ್ಲಿ ತೊಡಗಿಸಲಾದೆ ತಾ ಹೇಳ್ದೊ.

ಕ್ರೀಡಾ ಸಮಿತಿ ಅಧ್ಯಕ್ಷ ಬಾಳಾಡಿ ಮನೋಜ್ ಮಾತಾಡಿ " ಈ ಸಲ ಮಹಿಳೆಯರ್‌ಗೆ ಕತ್ತಲ್–ಬೆಳ್ಕ್‌ಲಿ ಕಬ್ಬಡಿ ಪಂದ್ಯಾಟನ ಆಯೋಜಿಸಲಾದೆ. ಕ್ರೀಡಾಕೂಟದ ಅಂಗವಾಗಿ ನೇತ್ರದಾನ ಶಿಬಿರ, ರಕ್ತದಾನ ಶಿಬಿರ ಹಂಗೆ ಬೇರೆ ಬೇರೆ ಜಂಬರಗಳ್ನ ಸ ಹಮ್ಮಿಕಂಡವೆ" ತಾ ಮಾಹಿತಿ ಕೊಟ್ಟೊ. ಹಂಗೆನೆ ಈ ಸಲದ ಪೈಕೇರ ಕಪ್ ಕ್ರಿಕೆಟ್ ಜಂಬರಕೆ ತಮ್ಮ ತಂಡದ ಹೆಸ್ರ್ ನೊಂದಾಯಿಸವು ಏಪ್ರಿಲ್ 10ನೇ ತಾರೀಖ್ ಒಳಗೆ ನೊಂದಾವಣಿ ಮಾಡಿಕಣಕ್ ತಾ ತಿಳ್ಸಿದೊ. ಸಂಪರ್ಕಿಸವ್ಕೆ ಪ್ರಸಾದ್ 9481770780, ಮನೋಜ್ 9483111134 ಇವರತ್ರ ಹೆಸ್ರ್ ನೊಂದಾಯಿಸಿಕಣಕ್. ಪತ್ರಿಕಾ ಗೋಷ್ಠಿಲಿ ಪ್ರಮುಖರಾದ ಕಟ್ಟೆಮನೆ ರೋಶನ್, ಪೈಕೇರ ನಂದ, ಯಾಲದಾಳು ಹರೀಶ್, ಪುದಿನೆರವನ ರಿಷೀತ್ ಉಪಸ್ಥಿರಿದ್ದೊ.

# ಅರೆಭಾಷೆ ಅಕಾಡೆಮಿನ ಕಲಿಕಾ ಶಿಬಿರಲಿ ಮೂಡಿಬಂದ ಕರ್ವಾಲೋ ನಾಟಕ

68ನೇ ಗಣರಾಜ್ಯೋತ್ಸವದ ಸಂದರ್ಭಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅವು ಹಮ್ಮಿಕಂಡಿದ್ದ ನಾಟಕ ಕಲಿಕಾ ಶಿಬಿರಲಿ ಅಕಾಡೆಮಿ ಸದಸ್ಯ ಹಂಗೆ ರಂಗ ನಿರ್ದೇಶಕ ಮೋಹನ ಸೋನ ನಿರ್ದೇಶಿಸಿದ ಅರೆಬಾಸೆ ನಾಟಕ 'ಕರ್ವಾಲೊ' ಸುಳ್ಯದ ಯುವಜನ ಸಂಯುಕ್ತ ಮಂಡಳಿಯ ರಂಗ ವೇದಿಕೆಲಿ ಪ್ರದರ್ಶನ ಆತ್.

'ಕರ್ವಾಲೋ' ಕನ್ನಡದ ಖ್ಯಾತ ಕಾದಂಬರಿಕಾರ, ಪ್ರಗತಿಪರ ಚಿಂತಕ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಅವರ ಪ್ರಸಿದ್ಧ ಕಾದಂಬರಿ, ಮೂವತ್ತಾರ್ ಸಲ ಮುದ್ರಣ ಆದ ಕನ್ನಡದ ಈ ಕಾದಂಬರಿ ಬೇರೆ ಬೇರೆ ದೇಶೀಯ ಭಾಷೆಗಳ್ಲಿ ಹಂಗೆ ಇಂಗ್ಲೀಷ್, ಜಪಾನಿ ಸೇರ್ದಂಗೆ ಅನ್ಯದೇಶೀಯ ಭಾಷೆಗಳ್ಲೂ ಅನುವಾದ ಆದ ವಿಶಿಷ್ಟ ವೈಜ್ಞಾನಿಕ ಕೃತಿ ಅವ್ವು. ಕರ್ವಾಲೋ ಕಾದಂಬರಿಲಿ ಬರುವ ಮಲೆನಾಡ್‌ನ ಜೀವನ ಮತ್ತೆ ಅರೆಭಾಷಿಕ ಜನರ ಜೀವನಕ್ರಮ ಒಂದೇ ತರ ಇದ್ದ ಹಿನ್ನಲೆಲಿ ಈ ಕಥಾವಸ್ತುನ ರಂಗ ಭಾಷೆಗೆ ಅಳವಡ್ಸಿಕಂಡ್ ಕಲಿಕಾ ರಂಗಶಿಬಿರಲಿ ನಾಟಕನ ರೂಪಿಸಲಾಗಿತ್. ತೇಜಸ್ವಿಯವರ ಈ ಕರ್ವಾಲೊ ಕಾದಂಬರಿನ ನಾಟಕ ರೂಪಕವಾಗಿ ರಂಗಲಿ ತರ್ವ ಪ್ರಯತ್ನವಾಗಿ ಅದರ ಅರೆಭಾಷೆ ಪ್ರತಿ ಹಂಗೆ ಸಾಹಿತ್ಯನ ಅಕಾಡೆಮಿ ಸದಸ್ಯ, ಪ್ರಾಧ್ಯಾಪಕ ಡಾ.ಪೂವಪ್ಪ ಕಣಿಯೂರು ಸಿದ್ಧಪಡ್ಸಿಯೊಳೊ.

ನಾಟಕ ಪ್ರದರ್ಶನದ ಸಭಾ ಕಾರ್ಯಕ್ರಮಲಿ ಅಕಾಡೆಮಿಯ ಅಧ್ಯಕ್ಷ ಕೊಲ್ಯದ ಗಿರೀಶ್ ಅಧ್ಯಕ್ಷತೆ ವಹಿಸಿದ್ವೊ. ಮುಖ್ಯ ನೆಂಟ್ರ್ ಬರಹಗಾರ ಮತ್ತೆ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ ಆಪ್ತ ಡಾ. ನರೇಂದ್ರ ರೈ ದೇರ್ಲ ಅವು ತೇಜಸ್ವಿ ಅವರ ಬರಹಗಳ್ಲಿ ಕಾಡಿನೊಟ್ಟಿ ನಾಡು ಉಂಟು ಮಾಡ್ವ ಅರಾಜಕತೆನ ಚಿತ್ರಣನ ಕಾಣಕ್. ತೇಜಸ್ವಿ ಪ್ರಕೃತಿನ ಅಪ್ಪಿಕಂಡ ಬಗೆಲಿ ಅಧ್ಯಯನದ ಕಾಳಜಿಯೇ ಪ್ರಧಾನ ತಾ ಅಭಿಪ್ರಾಯ ವ್ಯಕ್ತಪಡ್ಸಿದೊ. ಅಕಾಡೆಮಿ ರಿಜಿಸ್ಟ್ರಾರ್ ಉಮರಬ್ಬ ಮತ್ತೆ ಸದಸ್ಯ ಬೋಜಪ್ಪಗೌಡ ಸಭೆನುದ್ದೇಶಿಸಿ ಮಾತಾಡ್ದೊ.

ಜಂಬರಲಿ ಅಕಾಡೆಮಿಯ ಸದಸ್ಯರಾದ ಬಿ.ಸಿ.ವಸಂತ, ಮಂದ್ರೀರ ಮೋಹನ್ ದಾಸ್, ಸಂಗೀತ ರವಿರಾಜ್, ಸದಾನಂದ ಮಾವಾಜಿ, ಯಶವಂತ ಕುಡೆಕಲ್ ಮತ್ತೆ ಅಣ್ಣಾಜಿಗೌಡ ಇವು ಭಾಗವಹಿಸಿದ್ವೊ. ಸ್ಥಳೀಯ ಕಲಾವಿದರ್ನ ಬಳ್ಸಿಕಂಡ್ ನಾಟಕ ಪ್ರದರ್ಶನ ಯಶಸ್ವಿಯಾತ್, ಸೇರ್ದ ಜನರ ಮೆಚ್ಚುಗೆಗೆ ಪಾತ್ರ ಆತ್.

* * * * *

# ಹೊಸ ರುಚಿ

## ಬೀಟ್ರೂಟ್ ಕಟ್ಲೇಟ್

**–ಚೊಕ್ಕಾಡಿ ಪ್ರೇಮ ರಾಘವಯ್ಯ**

ಬೇಕಾದ ಪದಾರ್ಥಗ
2 ಇಲಾತ್ ಗೆಂಡೆ, 1 ಬೀಟ್ ರೂಟ್
ಹಂಞ ಶುಂಠಿ, 10 ಎಸಳ್ ಬೆಳ್ಳುಳ್ಳಿ
1 ಕಟ್ ಸಂಬಾರ ಸೊಪ್ಪು, 3 ಈರುಳ್ಳಿ, 3 ಹಸಿ ಮೆಣ್ಸ್
1 ಚಮ್ಚ ಮೆಣ್ಸ್‌ನ ಹೊಡಿ, 1/2 ಚಮ್ಚ ಅರಿಸಿನ ಹುಡಿ
ರುಚಿಗೆ ಹಂಞ ಉಪ್ಪು, ರಸ್ಕ್‌ನ ಹೊಡಿ

**ಮಾಡುವ ವಿಧಾನ :–**

ಕುಕ್ಕರ್ಲಿ ಬೀಟ್ರೂಟ್ ಮತ್ತೆ ಇಲಾತ್ ಗೆಂಡೆನ ನೀರ್‌ಲಿ ಹಾಕಿ ನಾಕ್ ವಿಶಲ್ ಆದ ಮೇಲೆ ಇಳ್ಸಿ, ಅದರ ತೊಪ್ಪೆ ತಗ್ದ್ ಗಂಟ್ ಆಗದಂಗೆ ಲಾಯ್ಕ ಕಲ್ಸಿಕಣಕು ಮತ್ತೆ ಶುಂಠಿ, ಬೆಳ್ಳುಳ್ಳಿ, ಹಸಿಮೆಣ್ಸ್, ಈರುಳ್ಳಿ ಸಣ್ಣಂಗೆ ಕತ್ತರ್ಸಿಕಣಕು. ಒಂದು ಬಾಣಲೆ ತಕಂಡ್ ಅದ್ಕೆ ಒಂದು ಚಮ್ಚ ಎಣ್ಣೆ ಹಾಕಿ ಸೊಲ್ಪ ಬಾಡ್‌ಕನ ಇಳ್ಸಿ ಅದ್ಕೆ ಸಂಬಾರ ಸೊಪ್ಪು ಹಾಕಿ ಮೆಣ್ಸ್‌ನ ಹೊಡಿ, ಅರ್ಸಿಣ ಹೊಡಿ, ಗರಂ ಮಸಾಲ ಹಾಕಿ ತಿರ್ಗಿಸಿ ಅದ್ಕೆ ಬೀಟ್‌ರೂಟ್ ಮತ್ತೆ ಗೆಂಡೆನ ಹಾಕಿ ತಿರ್ಗುಸಕು.

ಈಗ ಒಂದು ಪಾತ್ರೆ ತಕಂಡ್ ಒಂದು ಚಮ್ಚ ಎಣ್ಣೆ ಹಾಕಿ ಒಲೆ ಮೇಲೆ ಇಸಿ. ಕಲ್ಸಿ ಇಟ್ಟ ಪಾಕನ ತಕಂಡ್ ಬೇಕಾದ ಆಕಾರಕೆ ಮಾಡಿಕಂಡ್ ರಸ್ಕ್ ಹೊಡಿ ಮೇಲೆ ಹೊರ್‍ಳ್ಸಿ, ರವೆ ಮೇಲೆ ಹೊರ್‍ಳ್ಸಿ ಎಣ್ಣೆಗೆ ಹಾಕಿ ಎರ್ಡೂ ಕಡೆ ಲಾಯ್ಕ ಬೇಯ್ಸಕು. ಈಗ ಹಿಂಬಡ್ತ್ ಕಾಫಿಗೆ ಬಿಸ ಬಿಸ ಬೀಟ್‌ರೂಟ್ ಕಟ್ಲೆಟ್ ರೆಡಿ.

# ರೈತ

–ಸುಮಂಗಲ ಯು. ಕಿನಿ

ಸ್ವಾತಂತ್ರ್ಯ ಸಿಕ್ಕಿ ಕಳ್ದುಟು ಎಷ್ಟೋ ಸಂವತ್ಸರ
ರೈತನುನ್ನತಿಗೆ ಬೇಕ್ ಹಂಞಾ ಅವಸರ

ರೈತ ದೇಶದ ಬೆನ್ನೆಲುಬು
ಮುರ್ದೊಳೊ ಯಾಕೊ ಅವನ ಪಕ್ಕೆಲ್ಬು

ಭೂರಮೆಯ ಮಂಞಾ ಹಿಡ್ದುಟು ನೊಗ
ಉಳುವವನೇ ಹೊಲದೊಡೆಯ,
ಬಿತ್ತುವನು ಸದಾ ಬೆಳೆಯ

ಆಳುವ ದೊರೆಯ ಸ್ವಾರ್ಥಭಾವದಿ, ಹಬ್ಯುಟು ಕರಿನೆರಳು
ದುಡಿವ ಕರಗಳು, ವ್ಯರ್ಥಾಲಾಪದಿ
ಸಾವಿಗೆ ಕೊರಳು

ಮಾನವೀಯತೆಯ ಸೋಗ್‌ಲಿ ನಡ್ದದೆ
ನಿತ್ಯ ನರ್ತನ
ಬದಲಾದುಲೆ ರೈತನ ಸತ್ಯನರಕಯಾತನ

ಬೆಳ್ದಷ್ಟ್ ಬೆಳೆ, ಬಾಳೆಲ್ಲಾ ಗೋಳೆ
ಬರ್ದಷ್ಟ್ ಹಾಳೆ, ಕವಿಯಲಿ ಹೊಂಬಾಳೆ

ಹೆಣ್ಣ್ ಹೊನ್ನು ಮಣ್ಣು ತೇಳ್ಕಂಡ್ ಸುತ್ತುತಾ
ಉಟ್ಟು ವಿಷವೃತ್ತ, ಅತೀಆಸೆತ್ತರದ ಹುತ್ತ,
ಹುಚ್ಚೆಬ್ಬಿಸಿ ಚಂಚಲಚಿತ್ತ

ದುಡುದು ಮಡಿದವನು ನೇಗಿಲಯೋಗಿ
ಕಡ್ದ್ ಮತ್ತೇರಿ ಉಣುವವನು ಭೋಗಿ

ಸುಮ್ಮನೆ ಸತಾಯ್ಸಿ, ಕುಗ್ಗಿಸದಿರಿ, ದುಡಿವ ಕುದಿ
ನಮ್ಮಯ ರೈತ ಜೀವನದ ಸದಾ ಹರಿವ ನದಿ

ತಪ್ಪಿಹೋದರೆ ರೈತ_ಕೃಷಿಯ ಸಹವಾಸ, ಕೆಡವಲಿದೆ ಉಪವಾಸ
ಉಪ್ಪಿದ್ದರೆ ರುಚಿ ಉಟ್ಟು, ರೈತ ಇದ್ದರೆ ಖುಷಿ ಉಟ್ಟು

ಭೂರಮೆಯ ಮಡ್ಲಲಿ, ಬೆಳೆಯಲಿ ರೈತ ಹಾಯಾಗಿ
ಸ್ವಕೃಪೆಯ ಕಡಲಲಿ,
ಈಜಾಡಲಿ ಪುನೀತನಾಗಿ

ಒಡೆಯರೆಲ್ಲ ತಳೆಯಲು ಸೂಕ್ತ ನಿರ್ಣಯ
ಬೆಳೆದ ಬೆಳೆ–ಬೆಲೆಗೂ ಪರಿಣಯ,
ಹರಸೋಣ ಸದಾ ಶುಭಾಶಯ

ವೃದ್ಧಿಸಲಿ ರೈತ–ಒಡೆಯನ ನಂಟ್
ದೊಡ್ಡದಾಗಲಿ ದೇಶಾಭಿವೃದ್ಧಿಯ ನಗಂಟ್
ತೋರ್ಸದಿರ್ಲಿ ಯಾವುದೇ ನೆಪ ಕುಂಟ್

ರೈತಂಗೆ ಸಿಕ್ಕಲಿಎಲ್ಲಿಲ್ಲದ ಜಯ
ತಳೆಯಬೇಕಿಲ್ಲ ಯಾವುದೇ ಭಯ

ಸಾಕಿನ್ನ್ ಮಹಾಪಾಪದ ಆತ್ಮಹತ್ಯೆ
ಸಾಧಿಸಿನೀಡಕು,
ಆತ್ಮಕ್ಕೆ ಭತ್ಯೆ




## ರಾಷ್ಟ್ರ ಮಟ್ಟದ ಸ್ಪರ್ಧೆಗೆ ಮಿಲನಾ ಭರತ್ ಆಯ್ಕೆ

ಸರ್ಕಾರಿ ನೌಕರರ ರಾಷ್ಟ್ರಮಟ್ಟದ ಸಾಂಸ್ಕೃತಿಕ ಸ್ಪರ್ಧೆಗೆ ಕೊಡಗು ಜಿಲ್ಲೆನ ಮಿಲನಾ ಭರತ್ ಆಯ್ಕೆ ಆಗೊಳೊ. ಶಿವಮೊಗ್ಗಲಿ ನಡ್ದ ರಾಜ್ಯಮಟ್ಟದ ಪೈಪೋಟಿಲಿ ಭರತನಾಟ್ಯ, ಒಡಿಸಿ, ಕುಚಿಪುಡಿ ಈ ಮೂರು ವಿಭಾಗಲಿ ಪ್ರಥಮ ಸ್ಥಾನ ಪಡ್ಕಂಡ್ ರಾಷ್ಟ್ರಮಟ್ಟದ ಸ್ಪರ್ಧೆಲಿ ಭಾಗವಹಿಸಿಕೆ ಅರ್ಹತೆನ ಪಡ್ಕಂಡೊಳೊ. ಇವು ಸೋಮವಾರಪೇಟೆ ತಾಲೂಕು ಮೀನುಗಾರಿಕೆ ಇಲಾಖೆ ಸಹಾಯಕ ನಿರ್ದೇಶಕಿಯಾಗಿ ಕಾರ್ಯ ನಿರ್ವಹಿಸ್ತಾ ಒಳೊ.

* * * * *

## ಪೊನ್ನಿ ತಿಂಗಲ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ದೈವಾಧೀನರಾದವರ ವಿವರ

| ಹೆಸ್ರ್ | ವಯಸ್ | ತೀರ್ದ ತಾರೀಖ್ |
|---|---|---|
| ಚೆಟ್ಟಿಮಾಡ ಬೆಳ್ಯಪ್ಪ | 56 | 21–1–2017 |
| ಗಗನ್ ಮೊಟ್ಟನ | 25 | 25–1–2017 |
| ಜೈನೀರ ಮಾಯವ್ವ | – | 25–1–2017 |
| ಕುಯ್ಯಮುಡಿ ಚೋಂದವ್ವ | – | 28–1–2017 |
| ಕೊಡಗನ ಬಿದ್ದಪ್ಪ | 85 | 29–1–2017 |
| ಹೊಸೊಕ್ಲು ಸೋಮಯ್ಯ | 88 | 1–2–2017 |
| ತೆಕ್ಕಡೆ ಆನಂದ | 85 | 2–2–2017 |
| ಪಡ್ನೊಳನ ಸುಮಿತ್ರ | – | 5–2–2017 |
| ಉಳುವಾರನ ಬೋಜಮ್ಮ | 87 | 6–2–2017 |
| ಪರಿಚನ ಬೆಳ್ಳಿಯಪ್ಪ | 71 | 8–2–2017 |
| ಪೋರೆಯನ ನಾಗರಾಜು | – | 8–2–2017 |
| ನಂಗಾರು ಪಾರ್ವತಿ | 88 | 10–2–2017 |
| ಚೆರಿಯಮನೆ ಬಾಲಕೃಷ್ಣ | 55 | 12–2–2017 |
| ಸೆಟ್ಟೆಜನ ಕರುಂಬಯ್ಯ | 98 | 15–2–2017 |
| ಬಾರಿಕೆ ಸುಬ್ಬಯ್ಯ | 92 | 17–02–2017 |
| ಕೈಮಂದನ ಸೋಮಯ್ಯ | 88 | 17–2–2017 |

*ನಾಕ್ಕೆ ಸಿಕ್ಕ ಮಾಹಿತಿ ಪ್ರಕಾರ ಇಲ್ಲಿ ಪ್ರಕಟಿಸಿಯೊಳೊ. ಇನ್ನ್ ಮುಂದೆ ಯಾವುದಾದರ್ ಮಾಹಿತಿಗ ಇದ್ದರೆ ನಮ್ಮೊಂದಿಗೆ ಹಂಚಿಕಣಿ.

* * * * *

ನಮ್ಮ ಪತ್ರಿಕೆಗೆ ಕತೆ, ಕವನ, ಹನಿಗವನ, ಚುಟುಕು, ಲೇಖನ, ಅನುಭವ ಕಥನ, ಪ್ರವಾಸ ಕಥನ
ಹಂಗೆ ಪತ್ರಿಕೆ ಬಗ್ಗೆ ನಿಮ್ಮ ಅನ್ನಿಕೆ ಅಭಿಪ್ರಾಯ ಗಳ್ನ ಬರೆಯವು ಸಂಪೂರ್ಣ ಅರೆಬಾಸೆಲಿ ಬರ್ದ್

**ಅರೆಬಾಸೆ ಮುಡ್ಪು ಪತ್ರಿಕೆ**

**C/o ವಸಂತ ಟ್ರೇಡರ್ಸ್**
**ಬೈಪಾಸ್ ರಸ್ತೆ, ಗೋಣಿಕೊಪ್ಪ –571213**
**ವಾಟ್ಸಾಪ್‌ಲಿ ಕಳ್ಸಿರೆ: 9535615759 । ಮಿಂಚಂಚೆಲಿ ಕಳ್ಸಿರೆ: arebasepatrike@gmail.com ಗೆ ಕಳ್ಸಿ ಕೊಡಿ**














* Design for permanent Irrigation Pipelines
* One time Investment
* Easy to operate
* We supply your requirement

## ವಸಂತ್ ಟ್ರೇಡರ್ಸ್




ಬೈಪಾಸ್ ರಸ್ತೆ, ವೆಂಕಟಪ್ಪ ಬಡಾವಣೆ, ಗೋಣಿಕೊಪ್ಪಲು, ದ.ಕೊಡಗು 571 123

Contact : 08274-247661 Mob : 94487 95589, 94485 87968

ಶಾಖೆ : ಕಕ್ಕೆಹೊಳೆ, ಸೋಮವಾರಪೇಟ್ – 8904145443

E-mail : vasanthtradersgkl@gmail.com